ISSN 2320 - 9941



ಸಾಹಿತ್ಯ-ಸಂಸ್ಕೃತಿ ಮಾಸಿಕ

# ಪ್ರತಿಸ್ಪಂದ

ಬೆಲೆ : 10 ರೂ

## ಕೊಡು - ಕೊಳ್ಳುವಿಕೆಗಳ ಸಂಕರ ...

ಸಂಪುಟ : 1 ಸಂಚಿಕೆ : 7 ಜುಲೈ 2013




## ಮ್ಯಾಥ್ಯೂ ಆರ್ನಾಲ್ಡ್ ನ 'ಸಂಸ್ಕೃತಿ'ಯಲ್ಲಿ ಪ್ರಭೆ ಮತ್ತು ಮಾಧುರ್ಯದ ಕುರುಹು




## ಕಾವ್ಯ ಸಾಲುಗಳ ನಡುವಿನ ಓದು




## ಕಾವ್ಯತತ್ವವನ್ನು ಬಳಸುವ ಮುನ್ನ...



## ಶ್ರಮಸಂಸ್ಕೃತಿ ಮತ್ತು ಬದುಕು



# ಪ್ರತಿಸ್ಪಂದ

ಜುಲೈ 2013
ಸಂಪುಟ : 1 ಸಂಚಿಕೆ : 7

**ಸಂಪಾದಕರು:**
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com

**ಮುದ್ರಕರು:**
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125

**ಚಂದಾ ವಿವರ:**

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ . |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಫುಟವಾಗಿ ಬರೆಯಿರಿ.

**ಒಳಪುಟಗಳಲ್ಲಿ**





# ನಿಮ್ಮೊಂದಿಗೆ ....

***"A Thing of Beauty is a joy forever..... An endless fountain of immortal drink"***

**John Keats**

**ಸತ್ಯ**ವು ವಿವೇಚನೆಯನ್ನು, ಸರಿತಪ್ಪನ್ನು ತರ್ಕಿಸಿ ತಣ್ಣನೆಯ ನೆಲೆಯಲ್ಲಿ ನಿಧಾರಗಳನ್ನು ತೆಗೆದುಕೊಳ್ಳುತ್ತದೆ. ಆದರೆ ಸೌಂದರ್ಯವು ನ್ಯಾಯ-ಅನ್ಯಾಯದ ಚೌಕಟ್ಟಿಗೆ ಸಿಗದೆ, ತರ್ಕದ ಗತಿಗೆ ಅಂಜದೆ, ತನ್ನ ಪಾಡಿಗೆ ತಾನು wild and lawless ಆಗಿ ಉಳಿದುಬಿಡುತ್ತದೆ. ಕಣ್ಣಿಗೆ ಕಾಣುವ ಅಧಿಕಾರಕ್ಕಿಂತ ಅಮೂರ್ತ ಸ್ಥಿತಿಗಳು, ಉದಾಹರಣೆಗೆ ಪ್ರೀತಿ, ಸ್ನೇಹ, ನಂಬಿಕೆಗಳು ನಮ್ಮನ್ನು ಹೆಚ್ಚಾಗಿ ಸೆಳೆಯುತ್ತವೆ. ಚಲನಶೀಲವಾದ ಕಲ್ಪನೆ ಮಾತ್ರವೇ ಇಂದ್ರೀಯ ಅನುಭವಗಳಿಗೆ ತಟ್ಟುವಂತೆ ಈ ಅಮೂರ್ತತೆಗಳ ಆಗುಹೋಗುಗಳನ್ನು ನಮಗೆ ಪರಿಚಯಿಸಬಲ್ಲದು. ಎಂಬುದು 'ಆಗುವ' ಪ್ರಕಿಯೆ ಎಂದು ಫೇಬಿಯನ್ ನಂಬುತ್ತಾನೆ.

ಈ ಸೌಂದರ್ಯ ಪ್ರಜ್ಞೆಯು ಸ್ವಾತಂತ್ರ್ಯವನ್ನು ಆಚರಿಸುತ್ತದೆ. ಆದ್ದರಿಂದಲೇ ಸದ್ಧರ್ಮಕ್ಕೆ ಮುನ್ನುಡಿಯಾಗುತ್ತದೆ. Ray Elliott ಇಂತಹ ಪರಮಾನಂದ ನೀಡುವ ಕಲ್ಪನೆಯು, (rapturous imagination) ಮಾನವರನ್ನು ಚಲನಶೀಲರನ್ನಾಗಿಸುತ್ತದೆ ಎನ್ನುತ್ತಾನೆ. ಚಲನಶೀಲ ಕಲ್ಪನೆಯ ಸುಳಿಗೆ ಒಮ್ಮೆ ಸಿಕ್ಕ ಯಾರೇ ಆಗಲಿ ಪ್ರಾಪಂಚಿಕ ಅನುಭವಗಳನ್ನು ಸುಮ್ಮನೆ ಅದು ಹೇಗೆ ಬರುವುದೋ ಹಾಗೆ ಗ್ರಹಿಸಿ ಒಪ್ಪಲಾರರು. ಆಟದಲ್ಲಿ ತಲ್ಲೀನವಾಗಿರುವ ಮಗುವಿನಂತೆ ಆ ಅನುಭವಗಳನ್ನು ಮನಸ್ಸಿನಲ್ಲಿಯೇ ರೂಪಿಸಿ, ಆಕರ್ಷಕವಾಗಿಸಿ, ಪರಿಪೂರ್ಣತೆಯನ್ನು ನೀಡಲೆತ್ನಿಸುತ್ತಾರೆ. ಈ ಪ್ರಕ್ರಿಯೆಯಲ್ಲಿ ತಮ್ಮ ಯಾಂತ್ರಿಕವಾದ ಸತ್ತಂತಹ ಬಾಳಿಗೆ ಚೈತನ್ಯ ದೊರಕಿಸಿಕೊಳ್ಳುತ್ತಾರೆ. ಇದು ಆಧ್ಯಾತ್ಮಿಕ ಮರುಹುಟ್ಟು, ಇಂತಹ ಮರುಹುಟ್ಟಿನ ಅನುಭವ ನೀಡುವ ಕಲೆ ಶ್ರೇಷ್ಠವಾದದ್ದು.

ಸತ್ಯ ಮತ್ತು ಸೌಂದರ್ಯದ ಗುರಿ ಸರ್ವರ ಒಳಿತೇ ಆದರೂ, ಅಧಿಕಾರವು ಆಯ್ದ ಕೆಲವರ ಹಿಡಿತದಲ್ಲಿರುವುದರಿಂದ ಸತ್ಯವು ಸಾಮಾನ್ಯರಿಗೆ ಮರೀಚಿಕೆಯಾಗಿರುತ್ತದೆ. ಸುಂದರವಾದದ್ದು ಯಾವುದೆಂಬುದನ್ನು ಅಧಿಕಾರವು ನಿರ್ಧರಿಸುವಂತಾಗುತ್ತದೆ. ಅಧಿಕಾರವು ವಿಕೇಂದ್ರೀಕರಣಗೊಂಡರೆ ಮತ್ತು ಅದನ್ನು ನಿಭಾಯಿಸುವ ಜವಾಬ್ದಾರಿ ನಾವು ಕಲಿತರೆ ಬದುಕು ಸುಂದರವಾದೀತು. ಜವಾಬ್ದಾರಿಗಳನ್ನು ಅರಿತು ಅದರ ಸಾಕಾರಕ್ಕೆ ಹೆಗಲುಕೊಡುವ ಬಯಕೆ ನಮ್ಮೆಲ್ಲರ ಒಳಿತನ್ನೇ ಬಯಸುತ್ತದೆ.



ವಂದನೆಗಳು.

– ಸಂಪಾದಕ

ಪ್ರಸ್ತುತ

# ಮ್ಯಾಥ್ಯೂ ಆರ್ನಾಲ್ಡ್ ನ 'ಸಂಸ್ಕೃತಿ'ಯಲ್ಲಿ ಪ್ರಭೆ ಮತ್ತು ಮಾಧುರ್ಯದ ಕುರುಹು

*It is a pursuit of our total perfection by means of getting to know, on all the matters which most concern us the best which has been thought and said in the world and through this knowledge, turning a stream of fresh and free thought upon our own stock notions and habits."* *Mathew Arnold.*

ನಮಗೆ ಪ್ರಮುಖವಾಗಿ ಸಂಬಂಧಿಸಿದ ಹಾಗು ಅನಿವಾರ್ಯವಾದ ತಿಳುವಳಿಕೆಯು ಪರಿಪೂರ್ಣ ಪರಿಣತಿಯನ್ನು ಗಳಿಸುವುದು, ಅದರೊಂದಿಗೆ ಶ್ರೇಷ್ಠವಾದದ್ದನ್ನು ಆಲೋಚಿಸುವುದು, ಆಜ್ಞಾನವನ್ನು ಜಗತ್ತಿಗೆ ತಿಳಿಸುವುದು, ಈ ಜ್ಞಾನದ ಮುಖೇನ ಜಡ್ಡುಗಟ್ಟಿದ ನಂಬಿಕೆಗಳು ಮತ್ತು ಆಚರಣಾ ಅಭ್ಯಾಸಗಳ ಮೇಲೆ ಚಿಲುಮೆಯಂತೆ ತಾಜಾ ಮತ್ತು ಮುಕ್ತ ಆಲೋಚನೆಗಳನ್ನು ಹೊರಹೊಮ್ಮುವಂತೆ ಪ್ರೇರೇಪಿಸುವುದೇ ಸಂಸ್ಕೃತಿಯೆಂದು ಮ್ಯಾಥ್ಯೂ ಆರ್ನಾಲ್ಡ್ ವ್ಯಾಖ್ಯಾನಿಸುತ್ತಾನೆ.

ಮುಕ್ತ ಮತ್ತು ನವೀನ ಆಲೋಚನಾ ಲಹರಿಯ ಬೆಳಕನ್ನು ನಮ್ಮ ಶೈಕ್ಷಣಿಕ, ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ದೈನಂದಿನ ಸವಾಲುಗಳ ಮೇಲೆ ಚೆಲ್ಲಿ ತನ್ನ ಹೊಳಪನ್ನು ಮೂಡಿಸುವುದು ಸಂಸ್ಕೃತಿಯ ಉದ್ದೇಶವಾಗಿರುತ್ತದೆ. ಸಂಸ್ಕೃತಿಯು ಪರಿಪೂರ್ಣತೆಯ ಅಧ್ಯಯನ ವಾಗಿರುತ್ತದೆ. ಈ ಪರಿಪೂರ್ಣತೆಯು ಸಾಮರಸ್ಯದಿಂದ ಕೂಡಿರಬೇಕು ಮತ್ತು ಮಾನವರ ಸರ್ವತೋಮುಖ ಬೆಳವಣಿಗೆಯನ್ನು ಆದರಿಸಬೇಕು. Hellenism, Hebraism, and Puritanism ಯೂರೋಪಿನ ಸಮಾಜದಲ್ಲಿ ಸಾಮರಸ್ಯವನ್ನು ಸಾಧಿಸುವಲ್ಲಿ ವಿಫಲವಾಗಿರುವುದನ್ನು ಇತಿಹಾಸ ಸಾಕ್ಷೀಕರಿಸಿದೆ. ಪರಿಪೂರ್ಣತೆಯನ್ನು ಸಾಧಿಸಲು ಆರ್ನಾಲ್ಡ್ 'Sweetness and Light of Culture' ನ ಈ ಸಂಸ್ಕೃತಿಯು ಸಮಾಜದ ಸರ್ವತೋಮುಖ ಬೆಳವಣಿಗೆಯನ್ನು ರೂಪಿಸಬೇಕು ಹಾಗು ಎಲ್ಲಾವರ್ಗದ ವಿಭಿನ್ನ ನಂಬಿಕೆಗಳಿಗೆ ಹಿತವಾಗುವಂತೆ ಮತ್ತು ಹಿತ ಬಯಸಿದವರ ಸದೃಢ ಅಭಿವೃದ್ಧಿಗೆ ಪೂರಕ ಬೆಳಕನ್ನು ಚೆಲ್ಲುವಂತಿರಬೇಕು ಎನ್ನುತ್ತಾನೆ.



ಮಾನವನ ಸ್ಫೂರ್ತಿಯ ಹಿಂದೆ ಇರುವ ಉತ್ತಮವಾದ ಸಾಹಿತ್ಯ, ಕಲೆ, ಮತ್ತು ವಿಜ್ಞಾನಗಳ ಸಂಸ್ಕೃತಿಯೂ ಸಾಮರಸ್ಯದ ಪರಿಪೂರ್ಣತೆಯನ್ನು ಆಶಿಸುತ್ತದೆ. ನಿಜವಾದ ಸಂಸ್ಕೃತಿಯು ಪರಿಪೂರ್ಣತೆಯ ಬಲವನ್ನು ಹೊಂದಿರುತ್ತದೆ. ಈ ಬೆಳವಣಿಗೆಯು ಆಂತರಿಕ ಪರಿಪಕ್ವತೆಯನ್ನು ಪ್ರೇರೇಪಿಸುತ್ತದೆ. ಇದರೊಂದಿಗೆ ನಿಜವಾದ ಸಾಮಾಜಿಕ ನಡವಳಿಕೆಯನ್ನು ಉನ್ನತೀಕರಿಸುತ್ತದೆ. ಸಂಸ್ಕೃತಿಯು ಮನುಷ್ಯನನ್ನು ಸದಾ ಕುತೂಹಲಕಾರಿಯನ್ನಾಗಿಯೂ ಮತ್ತು ಕ್ರಿಯಾಶೀಲನನ್ನಾಗಿಯೂ ಮಾಡುತ್ತದೆ. ವ್ಯಕ್ತಿಯು ಸಂಸ್ಕೃತಿಯ ಪ್ರೇರಣೆಯಿಂದ ಮತ್ತು ತನ್ನ ಸಹಚರರೊಂದಿಗಿನ ಪ್ರೀತಿ, ಸಾಮರಸ್ಯ, ಸಮಾನತೆಯ ಸಹಾಯದಿಂದ ತನ್ನಲ್ಲಿನ ದೋಷ, ದೌರ್ಬಲ್ಯಗೊಂದಲ ಮತ್ತು ದುಃಖದಿಂದ ಮುಕ್ತನಾಗಿ ಶ್ರೇಷ್ಠ ಆಲೋಚನೆಗಳನ್ನು ಹೊಂದಿ ಜಗತ್ತು ಉತ್ತಮ ಮತ್ತು ಸುಖವಾಗಿರಲು ಬಯಸುವಂತಿರಬೇಕು. ಇದು ಮನುಕುಲದ ಪರಮೋಚ್ಛ ಬೆಳವಣಿಗೆ ಯಾಗಿರುತ್ತದೆ. ಸಂಸ್ಕೃತಿಯೊಂದೇ ಈ ಕಾರ್ಯವನ್ನು ಸತ್ವಯುತವಾಗಿ ಮಾಡಬಲ್ಲದು. ಹಾಗಾಗಿ ಸಂಸ್ಕೃತಿಯು ಅಧ್ಯಯನದ ಮೂಲದ್ರವ್ಯ ಮತ್ತು ಅದರ ಅನನ್ಯ ಸ್ವರೂಪ.ಈ ಪ್ರಕ್ರಿಯೆಗೆ ಪ್ರೇರಣಾ ಬಲವಿರಬೇಕು. ಅದು ನೈತಿಕ ಮತ್ತು ಉತ್ತಮ ಸಾಮಾಜಿಕ ಬಾಂಧವ್ಯವನ್ನು ಅವಲಂಬಿಸಿರುತ್ತದೆ. ಈ ಸಂಬಂಧದ ಮೂಲ ಉದ್ದೇಶ Montesquieuನ ಮೂಲ ಮಂತ್ರ "To render an intelligent being yet more intelligent" ನಲ್ಲಿದೆ. Bishop Wilson ಹೇಳುವಂತೆ "To make reason and the will of God prevail".

ಸಮಾಜದಲ್ಲಿ ಉತ್ತಮವಾದದ್ದನ್ನು ಕಾಣಬೇಕೆನ್ನುವುದು will of God ಗೆ ಸಮೀಪವಾಗಿರುತ್ತದೆ. Worthy Notions of Reason and Will of God ಎರಡೂ ಸಮಾಜದ ಉನ್ನತಿಗೆ ಪ್ರಮಾಣಿಕತೆಯನ್ನು ತರುವ ಉದ್ದೇಶಗಳಾಗಿದ್ದು, ದೇವರ ಪ್ರೀತಿಗೆ ಪಾತ್ರವಾಗಿರುವುದರಿಂದ ಸಂಸ್ಕೃತಿಯು ಧ್ಯೇಯವಾಗಿರುತ್ತವೆ. ಸಂಸ್ಕೃತಿಯು ಬದುಕಿನ ಅನುಭವಗಳಲ್ಲಿನ ಪರಿಪಕ್ವತೆಯ ನಿರ್ಧಾರಗಳನ್ನು ಕಲೆ, ವಿಜ್ಞಾನ, ಕಾವ್ಯ, ತತ್ವಶಾಸ್ತ್ರ, ಇತಿಹಾಸ ಮತ್ತು ಧರ್ಮಗಳಲ್ಲಿ ಹುಡುಕುತ್ತಿರುತ್ತದೆ. ಈ ಪರಿಪೂರ್ಣತೆಯನ್ನು ಆತ್ಮದಲ್ಲಿ ಅಂದರೆ ನಮ್ಮೊಳಗೆ ಹುಡುಕಿಕೊಳ್ಳಬೇಕು. ಆರ್ನಾಲ್ಡ್ ನ ಮಾತುಗಳಲ್ಲಿ ಹೇಳುವುದಾದರೆ, "The Kingdom of God is within you and culture, like manner places human perfection in an internal condition in the growth and predominance of our humanity proper, as distinguished from our animity. It places in the ever-increasing efficacy and in the general harmonious expansion of these gift of thought and feeling which make peculiar dignity, wealth and happiness of human nature."

ಮನುಷ್ಯನ ಅಂತರಿಕ ಭಾವನಾನುಭವಗಳ ಶ್ರೇಷ್ಠತೆ ಆತನ ಬಾಹ್ಯ ಚಟುವಟಿಕೆಗಳಲ್ಲಿ ಸೂಚ್ಯವಾಗಿ ತೆರೆದುಕೊಳ್ಳುತ್ತದೆ. ಈ ಬಾಹ್ಯ ಚಟುವಟಿಕೆಗಳಿಂದ ಮಾನವರ ಆಂತರ್ಯವನ್ನು ಪ್ರವೇಶಿಸಬಹುದು. ಈ ಅಂತಃ ಸೌಂದರ್ಯವು ಸಂಸ್ಕೃತಿಯ ಫಲಶೃತಿ ಯಾಗಿರುತ್ತದೆ ಎಂದು ಆರ್ನಾಲ್ಡ್ ನಂಬುತ್ತಾನೆ. ಸಂಸ್ಕೃತಿಯು ಚಲನಶೀಲವಾಗಿದ್ದು ಮನುಷ್ಯನ ಬೆಳವಣಿಗೆಯ ಜೊತೆ ಜೊತೆಗೆ ತಾನು ಬೆಳೆಯುತ್ತದೆ; ಮತ್ತು ಮನುಷ್ಯನ ವ್ಯಕ್ತಿತ್ವದ ಪ್ರಖರತೆಯನ್ನು ತನ್ನ ಬೆಳಕಿನೊಂದಿಗೆ ಹೊರಚಲ್ಲುತ್ತದೆ. ಏಕೆಂದರೆ ಇದರ ಶಕ್ತಿಯು ಅಪರಿಮಿತವಾಗಿರುತ್ತದೆ ಮತ್ತು ಸದಾ ಬೆಳವಣಿಗೆಯ ರೂಪದಲ್ಲಿರುತ್ತದೆ.

"It endlessly grows in human wisdom and beauty of mind that spirit of the human race finds its ideal."

ಈ ಸ್ಥಾನವನ್ನು ತಲುಪಲು ಸಂಸ್ಕೃತಿಯು ಅತ್ಯಗತ್ಯ ಮಾನದಂಡವಾಗಿರುತ್ತದೆ ಮತ್ತು ಮಾನವರ ಮೌಲ್ಯವನ್ನು ನಿರ್ಧರಿಸುತ್ತದೆ. ಸಂಸ್ಕೃತಿಯು ಬಹುಮುಖತ್ವವನ್ನು ಹೊಂದಿರುತ್ತದೆ. ವ್ಯಕ್ತಿಯ ಬೆಳವಣಿಗೆಯ ಜೊತೆಜೊತೆಗೆ ಅವರ ಪರಿಸರದ ಪ್ರತಿಯೊಬ್ಬನ ಮೇಲೂ ಸಹಜ ಬೆಳಕನ್ನು ಚಲ್ಲುತ್ತದೆ. ಸಂಸ್ಕೃತಿಯು ಸಹಾಯದಿಂದ ವ್ಯಕ್ತಿಯು ಸಮಾಜಮುಖಿಯಾಗುತ್ತಾ ಪೂರಕ ಬೆಳವಣಿಗೆಯನ್ನು ಹೊಂದುತ್ತಾನೆ. ಸಂಸ್ಕೃತಿಯು ಧರ್ಮಕ್ಕಿಂತ ಭಿನ್ನವಾದದ್ದು. ಏಕೆಂದರೆ ಧರ್ಮದ ಸಂಸ್ಕೃತಿಯು ಪ್ರಭುತ್ವದ ಕವಚದೊಳಗಿರುತ್ತದೆ, ಅದರ ಮಿತಿಗೆ ಒಳಪಟ್ಟಿರುತ್ತದೆ. ಇದಕ್ಕೆ general expansion of human perfection ಇರುವುದಿಲ್ಲ. ಯಾವುದೇ ಒಂದು ಮುದ್ರೆಯ /ಚಿಹ್ನೆಯ ಆಕರ್ಷಣೆಯ ಸೆಳೆತದಲ್ಲಿರುವ ಸಂಸ್ಕೃತಿಯು ಸ್ವತಂತ್ರವಾಗಿರುವುದಿಲ್ಲ. ಸದಾಕಾಲ ಮನುಕುಲದ/ ಸಮಷ್ಟಿಯ ಸರ್ವತೋಮುಖ ಬದುಕನ್ನು ಬಯಸುವುದಿಲ್ಲ. ಆದ್ದರಿಂದಲೇ ಆರ್ನಾಲ್ಡ್ ಸಂಸ್ಕೃತಿಯು ಯಾವುದೇ Stigmaಗೆ ಅಂಟಿಕೊಂಡಿರಬಾರದೆಂದು ಬಯಸುತ್ತಾನೆ. ಸಂಸ್ಕೃತಿಯು ತನ್ನ ಪ್ರಾಭಲ್ಯವನ್ನು ತಾನೇ ಹೊಂದಿರಬೇಕು ತನ್ಮೂಲಕ ಸರ್ವರಿಗೂ ಮಾಧುರ್ಯವನ್ನು ಹಂಚಬೇಕು ಮತ್ತು ಈ ಮಾಧುರ್ಯವು ತನ್ನ ಅರಿವಿನ ಪ್ರಭೆಯ ಮೂಲಕ ಸರ್ವರನ್ನೂ ತನ್ನೆಡೆಗೆ ಸೆಳೆದು ಮನುಕುಲಕ್ಕೆ ಹಿತವಾಗುವ ಸ್ವಾದವನ್ನು ನೀಡಬೇಕು ಎನ್ನುವ ಆರ್ನಾಲ್ಡ್ ನ ವಿಚಾರಗಳನ್ನು ಈ ಲೇಖನವು ಸಂಕ್ಷಿಪ್ತವಾಗಿ ತಿಳಿಸಲು ಪ್ರಯತ್ನಿಸುತ್ತದೆ.

–ಶ್ರೀನಿವಾಸಪ್ಪ.ಜಿ
ಸ.ಪ್ರ.ದ. ಕಾಲೇಜು, ಹುಳಿಯಾರು
g.srinivasappa@gmail.com



## ಲೆಫ್ಟಿನೆಂಟ್ ಥಾಮಸ್ ಗ್ಲ್ಯಾನ್ ನ ವೃತಾಂತಗಳಿಂದ: ಪ್ಯಾನ್

ನಾನಂದೆ, "ನಾನು ಮೂರು ವಸ್ತುಗಳನ್ನು ಪ್ರೀತಿಸುತ್ತೇನೆ. ನಾನೊಮ್ಮೆ ಕಂಡ ಪ್ರೀತಿಯ ಕನಸನ್ನು ಪ್ರೀತಿಸುತ್ತೇನೆ, ನಿನ್ನನ್ನು ಪ್ರೀತಿಸುತ್ತೇನೆ, ಈ ತುಂಡು ಭೂಮಿಯನ್ನು ಪ್ರೀತಿಸುತ್ತೇನೆ."

"ಇವುಗಳಲ್ಲಿ ಯಾವುದನ್ನು ಉತ್ತಮವಾಗಿ ಪ್ರೀತಿಸುತ್ತೀಯ?"

" ಆ ಕನಸನ್ನು."



ಪ್ಯಾನ್ ಕಾದಂಬರಿಯು ವಿಲಕ್ಷಣ ಏಕಾಂತ ಪ್ರಿಯ ನಿರೂಪಕ ಲೆಫ್ಟಿನೆಂಟ್ ಥಾಮಸ್ ಗ್ಲ್ಯಾನ್ ರಕ್ತ ಮಾಂಸಗಳಿಗಿಂತ, ಭೂಮಿಗಿಂತಲೂ ಹೆಚ್ಚಾಗಿ ತನ್ನ ಕನಸನ್ನು ಪ್ರೀತಿಸುತ್ತಾನೆ. ಹತ್ತೊಂಬತ್ತನೇ ಶತಮಾನದ ಅಂತ್ಯ ಭಾಗದಲ್ಲಿ ಬದುಕಿ ಬಾಳಿದ ನಾರ್ವೆಯ Knut Hamsun (1859–1952) ಮನಸ್ಸಿನ ಕಾಳ ನೆರಳುಗಳಿಗೆ, ಕನಸುಗಳಿಗೆ, ಜೀವನದ ಅಸಹಜ ಮತ್ತು ಕಾವ್ಯಾತ್ಮಕ ಆಯಾಮಗಳಿಗೆ ತೀವ್ರ ಆಸಕ್ತಿಯಿಂದ ತುಡಿದ ಕಾದಂಬರಿಕಾರ. ಇಂತಹ ತುಡಿತಗಳಿಂದಲೇ ಯುರೋಪಿನ ಕಾದಂಬರಿ ಪ್ರಕಾರಕ್ಕೆ ನವಶಕ್ತಿಯನ್ನು ತುಂಬುವುದರ ಮೂಲಕ Edward Munch, Franz kafka, Thomas Mann, Ernest Hemingway & Henry Miller ಅಂತಹ 20ನೇ ಶತಮಾನದ power writers ಮತ್ತು ಕಲಾವಿದರುಗಳಿಗೆ ಸ್ಫೂರ್ತಿಯಾದವನು.

1888 ರಲ್ಲಿ ಡ್ಯಾನಿಶ್ ಸಾಹಿತ್ಯ ಪತ್ರಿಕೆ 'ನ್ಯೂ ಅರ್ಥ' ನಲ್ಲಿ ಪ್ರಕಟವಾದ Hamsun ನ ಕಾದಂಬರಿ 'ಹಂಗರ್' ನ ತುಣುಕು, ಓದುಗರಲ್ಲಿ ತೀವ್ರವಾದ ಆಸಕ್ತಿಯನ್ನು ಉಂಟುಮಾಡಿತು. ಕ್ರಿಸ್ಟಿಯೇನಿಯಾದಲ್ಲಿ ವಾಸವಾಗಿದ್ದ, ಹಸಿವಿನಿಂದ ನರಳುತ್ತಿದ್ದ ಯುವ ಬರಹಗಾರನೊಬ್ಬನ ಭಾವಗೀತಾತ್ಮಕ, ಪರಿಣಾಮಕಾರಿ ಕತೆಯು ತನ್ನ ತೀರಾ ಅಸಲೀತನದಿಂದಾಗಿ, ಮನೋವೈಜ್ಞಾನಿಕ ಗ್ರಹಿಕೆಗಳ ನವಿರಾದ ಪ್ರಸ್ತುತಿಯಿಂದಾಗಿ ಸಾಹಿತ್ಯ ವಲಯದಲ್ಲಿ ವಿದ್ಯುತ್ಸಂಚಾರವನ್ನೇ ಉಂಟುಮಾಡಿತು. ಹಂಗರ್ ಕಾದಂಬರಿಯ ನಂತರದ ಆವೃತಿಗೆ ಪೀಠಿಕೆ ಬರೆದ Isaac Bashevis Singer ತನ್ನ ಸಬ್ಜೆಕ್ಟೀವ್ ಪ್ರವೃತ್ತಿಯಿಂದಾಗಿ, ಅವಶಿಷ್ಟತೆಯಿಂದಾಗಿ (fragmentariness), ಫ್ಲ್ಯಾಶ್ ಬ್ಯಾಕ್ ತಂತ್ರ ವಿಧಾನದಿಂದ, ಭಾವಗೀತಾತ್ಮಕತೆಯಿಂದಾಗಿ Hamsun ಎಲ್ಲಾ ರೀತಿಯಿಂದಲೂ ಆಧುನಿಕ ಸಾಹಿತ್ಯ ಪಂಥದ ಪಿತಾಮಹನೆನ್ನಿಸಿಕೊಳ್ಳಲು ಅರ್ಹನಿದ್ದಾನೆ ಎಂದು ಮೆಚ್ಚಿಕೊಳ್ಳುತ್ತಾನೆ. 20ನೇ ಶತಮಾನದ ಆಧುನಿಕ ಕಾದಂಬರಿಯ ಇಡೀ ಪಂಥ Hamsun ನ ಶೈಲಿಯಿಂದ ಟಿಸಿಲೊಡೆಯಿತು ಎನ್ನುತ್ತಾನೆ.

1890ರಲ್ಲಿ ಹಂಗರ್ ಕಾದಂಬರಿಯ ಅನುವಾದಿತ ಕೃತಿಗಳು ಪ್ರಕಟವಾಗುತ್ತಿದ್ದಂತೆಯೇ ಇಡೀ ಯುರೋಪ್ Hamsun ನನ್ನು ಕೊಂಡಾಡಿತು. ಮೂರು ವರ್ಷಗಳ ನಂತರ ಪ್ಯಾರೀಸ್ ನಲ್ಲಿ ನೆಲೆಸಿ ತಣ್ಣಗಿನ ಆದರೆ ಎದೆಗೊಂದಿಸುವ ಕಾದಂಬರಿ 'ಪ್ಯಾನ್' ಅನ್ನು ಬರೆಯಲು ತೊಡಗಿದನು. ಉತ್ತರ ನಾರ್ವೆಯ ದೂರದ ಬೆಟ್ಟದ ಹಳ್ಳಿಯಲ್ಲಿ ನಡೆಯುವ ಈ ಕತೆಯು 1894 ರಲ್ಲಿ ಪ್ರಕಟವಾಯಿತು. ಎರಡು ವರ್ಷಗಳ ಹಿಂದೆ ಇಸೋಪ್ ನಾಯಿಯೊಂದಿಗೆ ಪರ್ವತಗಳ ಹಳ್ಳಿಯಲ್ಲಿ ಕಳೆದ ಬೇಸಿಗೆ ರಜಾ ದಿನಗಳನ್ನು ಆತ್ಮೀಯವಾಗಿ, ಲೆಫ್ಟಿನೆಂಟ್ ಥಾಮಸ್ ಗ್ಲ್ಯಾನ್ ನಿರೂಪಿಸುತ್ತಾನೆ. ನಾಯಿಯೊಂದಿಗೆ ಕಾಡಿನಲ್ಲಿ ಬೇಟೆಯಾಡುತ್ತಾ ಕಾಲಕಳೆಯುತ್ತಿದ್ದ ಗ್ಲ್ಯಾನ್ ಬಾಗಿದ ಹುಬ್ಬಿನ ಉದ್ದನೆಯ ಹುಡುಗಿಯೊಬ್ಬಳನ್ನು ಭೇಟಿ ಮಾಡುವವರೆವಿಗೂ ಆನಂದಾತಿಶಯವಾಗಿಯೇ ಇದ್ದ. ಅವನ ಯೋಚನೆಗಳಲ್ಲೆಲ್ಲಾ ಅವಳೇ ಆಗಿ ಅವನ ಏಕಾಂತವನ್ನು ಕದಡುತ್ತಾಳೆ. ಗ್ಲ್ಯಾನ್‌ನ ಪಾಶವೀ

ನೋಟಕ್ಕೆ ಆ ಮೋಹಕವಾದ ಆದರೆ ಸಿಡುಕಿನ ಹುಡುಗಿಯೂ ಮನಸೋಲುತ್ತಾಳೆ. ಅವರಿಬ್ಬರ ವ್ಯವಹಾರಗಳು ಬೇಸಿಗೆಯ ದಿನಗಳಂತೆ ಕ್ಷಣಿಕವಾದರೂ ಮೋಹಮುಗ್ಧವಾದ ರೀತಿಯಲ್ಲಿ, ಆ ಪ್ರೇಮಿ ಗಳಂತೆಯೇ ಸುಂದರವಾಗಿದ್ದರೂ ಮಾಯಾ ರೂಪವನ್ನು ಹೊಂದಿ ಹಿಡಿತಕ್ಕೆ ಸಿಗದಂತೆ ಇದ್ದವು.

ಪ್ಯಾನ್ ಕಾದಂಬರಿಯು Hamsun ನ ಗದ್ಯದ ಕಾವ್ಯಲಕ್ಷಣಗಳಿಂದಾಗಿ ಅಸಾದಾರಣವೆನ್ನಿಸಿದೆ. ಸ್ಫುಟವಾದರೂ ಮಿತವಾದ, ಅಪ್ಪಟ ಮತ್ತು ಪ್ರೇರಕಾಂಶಗಳನ್ನು ಒಳಗೊಂಡ, ಪ್ರಜ್ವಲಿಸುವ ಕನಸುಗಳನ್ನು ಸೂಚಿಸುವ, ಮತ್ತೆ ಮತ್ತೆ ರೂಪಾಂತರವಾಗುವ ಮನೋಭಾವನೆಗಳನ್ನು ಹೊರಸೆಳೆಯುವ ಅವನ ಕಾವ್ಯ ಮನಸೆಳೆಯುತ್ತದೆ. ಬೆಟ್ಟಗಳ ಬಗ್ಗೆ, ನಾರ್ವೆಯ ಕಾಡುಗಳ ಬಗ್ಗೆ ಸುಂದರವಾಗಿ ಬರೆಯುತ್ತಲೇ, ಬೇಸಿಗೆಯ ದೀರ್ಘ ಹಗಲುಗಳನ್ನು, ಮುಂಬರುವ ಗಾಢ ಚಳಿಗಾಲವನ್ನು ವಿವರಿಸುತ್ತಾನೆ. ಹಳದಿ ಕಾಡುಗಳಲ್ಲಿ ಪಟ್ಟಿಯಂತೆ ಓಡುವ ಹಾದಿಗಳು, ಪ್ರತಿದಿನವೂ ಹೊಸದಾಗಿ ಕಾಣುವ ನಕ್ಷತ್ರ, ನೆರಳಿನಂತೆ ಮಂಕಾಗಿ ಕಾಣುವ ಚಂದ್ರ, ಬೆಳ್ಳಿಯಲ್ಲಿ ಅದ್ದಿದ ಚಿನ್ನದ ನೆರಳು,........ ಗಾಢವಾದ, ಹೊಸತೆನ್ನಿಸುವ ಮನೋವೈಜ್ಞಾನಿಕ ತೀಕ್ಷ್ಣತೆಯನ್ನು ಈ ಕೃತಿಯಲ್ಲಿ ಕಾಣಬಹುದು. ಮಾನವ ಆತ್ಮವು ಅಸಂಬದ್ಧವಾದದ್ದು, ಪಳಗಿಸಲಾಗದ್ದು, ಇಂತಹ ಆತ್ಮವು ನಮ್ಮ ಪ್ರಾಪಂಚಿಕ ಗ್ರಾಹ್ಯಗಳನ್ನು ರೂಪಿಸುತ್ತದೆಯೇ ಹೊರತು ಪ್ರಪಂಚವು ನಮ್ಮನ್ನು ರೂಪಿಸುವುದಿಲ್ಲ, ಯಾಕೆಂದರೆ

" For it is within ourselves that the sources of joy and sorrow lie."

ಮಧ್ಯ ನಾರ್ವೆಯ Gudbrandsdal ಕಣಿವೆಯಲ್ಲಿರುವ ದೂರದ ಬೆಟ್ಟದ ಹಳ್ಳಿಯಲ್ಲಿ ಬೆಳೆದ Hamsun ನದ್ದು ರೈತ ಕುಟುಂಬ. ತಂದೆ ಅಲೆಮಾರಿ ದರ್ಜಿ. Hamsund ಎಸ್ಟೇಟ್ ಅನ್ನು ಕೊಂಡಾಗ Hamsunಗೆ ಮೂರು ವರ್ಷ. ದೀರ್ಘ ಚಳಿಗಾಲದ ಕತ್ತಲು ಮತ್ತು ಬೇಸಿಗೆ ಬಿಸಿಲಿನ ತಿಂಗಳುಗಳು ಅವನ ಬರವಣಿಗೆಗೆ ಪ್ರೇರಣೆ ನೀಡಿದವು. 1877 ರಲ್ಲಿ ಇನ್ನೂ 20 ವರ್ಷ ಕೂಡ ತುಂಬದ Hamsun ತನ್ನ ಮೊದಲ ಪುಸ್ತಕ 'The Enigmatic One' ಅನ್ನು ತನ್ನ ಸ್ವಂತ ಖರ್ಚಿನಿಂದ ಪ್ರಕಟಿಸುತ್ತಾನೆ. Dostoyevsky, Nietzsche & Strindbergಯಿಂದ ಪ್ರಭಾವಿತನಾಗಿ ಬರಹಗಾರನಾಗಲೇ ಬೇಕೆಂದು ನಿರ್ಧರಿಸಿ ಮುಂದಿನ ಹತ್ತು ವರ್ಷಗಳನ್ನು ಬೀದಿಗಳಲ್ಲಿ ಅನಿಶ್ಚಿತವಾದ, ಸಂಚಾರಿ ಜೀವನವನ್ನು ಅನುಭವಿಸುತ್ತಾನೆ. 1878 ರಲ್ಲಿ ಕ್ರಿಸ್ಟಿಯೇನಿಯಾದಲ್ಲಿ ಇದ್ದು, 1882 ರಲ್ಲಿ ಅಮೇರಿಕಾ ಬರಹಗಾರರಿಗೆ ಆಶ್ರಯ ನೀಡಬಹುದೆಂಬ ಆಸೆಯಿಂದ ಅಲ್ಲಿಗೆ ತೆರಳುತ್ತಾನೆ. ತನ್ನ ಪ್ರಯಾಣದ ಅವಧಿಯಲ್ಲಿ ಶಿಕ್ಷಕನಾಗಿ, ಕೂಲಿಯವನಾಗಿ, ಪತ್ರಕರ್ತನಾಗಿ, ಟ್ರಾಮ್ ನಿರ್ವಾಹಕನಾಗಿ, ತೋಟ ಕಾಯುವವನಾಗಿ ಕೆಲಸ ಮಾಡುತ್ತಾನೆ. 1888ರಲ್ಲಿ ಯೂರೋಪ್ ನಲ್ಲಿ ಶಾಶ್ವತವಾಗಿ ನೆಲೆಗೊಳ್ಳುತ್ತಾನೆ. ಅಮೇರಿಕಾ ದೇಶವನ್ನು ವಿಡಂಬಿಸುವ ಕಾದಂಬರಿ 'The Spiritual Life of Modern America'ವನ್ನು ಬರೆಯುತ್ತಾನೆ.

Hamsun ಅಭಿಪ್ರಾಯದಲ್ಲಿ ಭಾಷೆಯು ಸಾಮರಸ್ಯಪೂರ್ಣವಾದ ಸಂಗೀತದಂತೆ ಪ್ರತಿಧ್ವನಿಸ ಬೇಕು. ಬರಹಗಾರನು ಹೊಯ್ದಾಡುವ ಪದವನ್ನು ಯಾವಾಗಲೂ, ಎಲ್ಲಾ ಕಾಲಕ್ಕೂ ಹುಡುಕಬೇಕು, ಅದು ತನ್ನ ಯುಕ್ತತೆಯಿಂದಾಗಿಯೇ ಓದುಗನ ಆತ್ಮದಿಂದ ನಿಟ್ಟುಸಿರನ್ನು ಸೆಳೆಯುವಂತಿರ ಬೇಕು. 1920ರಲ್ಲಿ ಅವನ ಕೃತಿ The Growth of the Soil ನೊಬೆಲ್ ಪಾರಿತೋಷಕವನ್ನು ಪಡೆಯಿತು. ನಾರ್ವೆಯ ಶ್ರೇಷ್ಠ ನಾಗರೀಕನಾಗಿ ಮಾನ್ಯತೆ ಪಡೆದ Hamsun ತನ್ನ ಮುಪ್ಪಿನ ಕಾಲದಲ್ಲಿ ಫ್ಯಾಸಿಸ್ಟ ಪರವಾದ ಲೇಖನಗಳನ್ನು ಬರೆದನಾದ್ದರಿಂದ ಮತ್ತು ಜರ್ಮನಿ ನಾರ್ವೆಯನ್ನು ಎರಡನೇ ಮಹಾಯುದ್ಧದಲ್ಲಿ ಆಕ್ರಮಿಸಿಕೊಂಡಿದನ್ನು ಸಮರ್ಥಿಸಿದ್ದರಿಂದ ಬಂಧಿತನಾಗಿ, ದಂಡಕಟ್ಟಿ ಓಸ್ಲೋದಲ್ಲಿ ಮಾನಸಿಕ ಆಸ್ಪತ್ರೆಯಲ್ಲಿ ದಾಖಲಾಗ ಬೇಕಾಯಿತು. ಆದರೆ ಈ ಎಲ್ಲಾ ಆರೋಪಗಳಿಂದ ವಿಚಲಿತನಾಗದ Hamsun ತನ್ನ ವಿಚಾರಣೆ ಮತ್ತು ರಾಜಕೀಯ ಅಭಿಪ್ರಾಯಗಳನ್ನು 1949ರಲ್ಲಿ 'On Overgrown Paths' ಕೃತಿಯಲ್ಲಿ ವಿವರಿಸಿದ್ದಾನೆ.

---

ಆಧಾರ: "Classics", Jane Gleeson-White, Orient Publishing,2005.

# ಕಾವ್ಯ ಸಾಲುಗಳ ನಡುವಿನ ಓದು



ಕವಿತೆಯನ್ನು ಅರ್ಥ ಮಾಡಿಕೊಳ್ಳುವಾಗ ಪದಗಳು, ಸಾಲುಗಳ ಭಾಗಗಳು, ಸಾಲುಗಳು ಏನು ಹೇಳುತ್ತವೆ ಎಂದು ಚರ್ಚಿಸುತ್ತೇವೆ. ಪದಗಳನ್ನು ತೆಗೆದುಕೊಂಡಾಗ ಪದಗಳಿಂದಾಚೆಗೆ ಹೋಗುವ ಗೂಡಾರ್ಥ, ಸಂಕೇತಗಳು, ವೈವಿಧ್ಯ ಅರ್ಥಗಳು, ಉಲ್ಲೇಖಗಳನ್ನು ವಿಚಾರಮಾಡುತ್ತೇವೆ. ಪದದ ಅರ್ಥ ಎಷ್ಟೆಂದರೂ ಪದಗಳಿಂದ ಬಂದದ್ದಲ್ಲವೇ? ಪದಗಳು ಹಾಳೆಯ ಮೇಲೆ ಮೂಡಿದವುಗಳಲ್ಲವೇ? ನಾವು ಪದ್ಯಗಳನ್ನು ಅರ್ಥೈಸುವಾಗ ಹಾಳೆಯ ಮೇಲೆ ಕಾಣುವ ಪದಗಳಿಂದಾಚೆಗೆ ಚಲಿಸಬೇಕಾಗುತ್ತದೆ. ಧ್ವನಿ, ರೂಪ, ಹಾಗು ಸೂಚನೆಗಳು (implication) ಅರ್ಥಕ್ಕೆ ಕೊಡುವ ಕೊಡುಗೆ ದೊಡ್ಡದು.

ಈ ಲೇಖನದಲ್ಲಿ ಸೂಚನೆ ಅಥವಾ implication ಎಂದರೆ ಏನು ಎಂಬುದನ್ನು ತಿಳಿದುಕೊಳ್ಳೋಣ. Implication ಎಂದರೆ 'getting the point', 'reading between lines', 'beyond the statement' ಎಂದು ಅರ್ಥ. ಇದನ್ನು ಊಹೆ (inference) ಎಂದು ಕರೆಯುತ್ತೇವೆ. ಇದನ್ನು deduction ಎಂದು ಕರೆಯಬಹುದು. ಪದ್ಯಗಳನ್ನು ಅಥವಾ ಯಾವುದೇ ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳಲು ಇವು ಬಹಳ ಮುಖ್ಯ. ಪರೋಕ್ಷ ಸೂಕ್ಷ್ಮಗಳು, ಸಲಹೆಗಳು, ಸಂಕೇತಗಳಿಂದ (hint) ಗಳಿಂದ ತೀರ್ಮಾನಕ್ಕೆ ಬರುವುದನ್ನು inference ಗಳೆನ್ನುತ್ತೇವೆ. ಯಾವುದನ್ನು ಹೇಳಿಲ್ಲವೋ (said) ಆದರೆ ಊಹಿಸಬಹುದೋ (expected) ಅವುಗಳನ್ನು implication ಎನ್ನುತ್ತೇವೆ.

ಕಣ್ಣಿಗೆ ಕಾಣುವ ಪದಗಳು ಒಂದು ಪರೋಕ್ಷ ವ್ಯಾಖ್ಯಾನಕ್ಕೆ ದಾರಿ ಮಾಡಿಕೊಡುತ್ತವೆ. ಸಾಹಿತ್ಯದಲ್ಲಿ ಅರ್ಥವು ಒಂದು ನೇರವಾದ ಹೇಳಿಕೆಯಿಂದಾಚೆಗೆ ಚಲಿಸಬೇಕಾಗುತ್ತದೆ. ಹಾಗೆಂದು ಪರೋಕ್ಷ ಅರ್ಥಗಳನ್ನು ಬೇಕಾಬಿಟ್ಟಿ ತನಗೆ ತೋಚಿದ ರೀತಿಯಲ್ಲಿ ಹರಿಯ ಬಿಡುವ ಹಾಗಿಲ್ಲ. ಅದು ವಾಖ್ಯಾರ್ಥದ ಚೌಕಟ್ಟಿನಲೇ ತಿರುಗುವ ಅರ್ಥವಾಗಬೇಕು. ಓದುಗನಿಗೆ ನೇರವಾದ ಹೇಳಿಕೆ ಹಾಗು ಪರೋಕ್ಷವಾದ ಸಲಹೆಗಳ ನಡುವೆ ಇರುವ ವ್ಯತ್ಯಾಸದ ಅರಿವು ಸತತವಾಗಿ ಇರಬೇಕಾಗುತ್ತದೆ. ಒಂದು ಪದ್ಯದ ಅರ್ಥಕ್ಕೆ implication/ ಊಹೆಗಳು ಎಷ್ಟು ಮುಖ್ಯ ಎನ್ನುವುದನ್ನು John Donne ನ 'The Flea' ಪದ್ಯವನ್ನು ಓದುತ್ತಾ ತಿಳಿದುಕೊಳ್ಳೋಣ:



**The Flea**

Marke but this flea, and marke in this,
How little that which thou deny'st me is;
It sucked me first, and now sucks thee,
And in this flea, our two bloods mingled bee;
Thou knows't that this cannot be said
A sinne nor shame, nor loss of maidenhood,
Yet this enjoys before it wooe,
And pampered swells with one blood made of two,
And this, alas, is more than wee would doe.

"ಇಲ್ಲಿ, ಈ ಸೊಳ್ಳೆಯನ್ನು ನೋಡು, ನೆನಪಿಟ್ಟುಕೋ, ನನಗೆ ಒಂದು
ಕ್ಷುಲ್ಲಕ ವಿಷಯ ನಿರಾಕರಿಸುತ್ತೇಯೆ
ಆದರೆ ಆ ಸೊಳ್ಳೆಯನ್ನು ನೋಡು, ನನ್ನನ್ನು ಅದು ಮೊದಲು ಹೀರಿತು
ಇದನ್ನು ನೀನು, ಪಾಪ, ಅವಮಾನ, ಕನ್ಯತ್ವದ ನಾಶ ಎಂದು ಹೇಳಲಾಗುವುದಿಲ್ಲವಲ್ಲ.
ಅಲ್ಲಿ ನೋಡು, ಮದುವೆಗೆ ಮುಂಚೆ ಅದು ಸುಖವನ್ನನುಭವಿಸಿದೆ,
ಹಾಗೆಯೇ ಅದು ದಪ್ಪವಾಗಿ ಇಬ್ಬರ ರಕ್ತಗಳಿಂದಾದ ಒಂದು ರಕ್ತವಾಗಿದೆ.
ನಾವು ಮಾಡಲಾಗದನ್ನು ಅದು ಮಾಡಿದೆ".

ಪದ್ಯವು ಯಾವುದೇ ವಿವರಣೆಗಳಿಲ್ಲದೆ ಇದ್ದಕಿದ್ದಂತೆ ಶುರುವಾಗುತ್ತದೆ. 'ಇಲ್ಲಿ ನೋಡು', ನೀನು ಒಂದು ಕ್ಷುಲ್ಲಕ ವಿಷಯವನ್ನು ನಿರಾಕರಿಸುತ್ತೀಯೆ.' ಎಂದು.

ಇದರಿಂದ ನಮಗೆ ತಿಳಿಯುವ inference ಎಂದರೆ 'ಮಾತಗಾರನು ಒಬ್ಬರೊಂದಿಗೆ ಮಾತನಾಡುತ್ತಿದ್ದಾನೆ ಮತ್ತು ಈ ಮಾತುಗಾರನಿಗೆ ಕೇಳುಗ ಏನನ್ನೋ ನಿರಾಕರಿಸುತ್ತಿದ್ದಾನೆ, ಹಾಗು ಕೇಳುಗ ಮಾತುಗಾರನ ಇದುರಿಗೇ ಇದ್ದಾನೆ ಎಂದು. ಈಗ ನಾವು ಪ್ರಸಂಗದ ಹಿಂದಿನ ಮುಂದಿನ ಸಂಗತಿಗಳಲ್ಲಿನ ಪದಗಳನ್ನು (ಸೆರು, ಪಾಪ, ಅಪಮಾನ, ಕನ್ಯತ್ವದ ನಾಶ) ತೆಗೆದುಕೊಂಡಾಗ ಮಾತುಗಾರನು ಒಬ್ಬ ಸ್ತ್ರೀಯನ್ನು ಪ್ರೀತಿಗಾಗಿ ಒತ್ತಾಯಿಸುತ್ತಿದ್ದಾನೆ ಅಥವಾ ಮನವೊಲಿಸಲು ಯತ್ನಿಸುತ್ತಿದ್ದಾನೆ ಎನ್ನುವ ಊಹೆಗೆ ಅಥವಾ ತೀರ್ಮಾನಕ್ಕೆ ಬರುತ್ತೇವೆ.

ಕೆಲವು ಬಾರಿ ಈ inference ಗಳು ತಪ್ಪು ಅಥವಾ ತರ್ಕಬದ್ಧವಲ್ಲದ ಊಹೆಗಳು ಆಗಬಹುದು. ಈ ಪುರುಷ ಅಥವಾ ಮಹಿಳೆಯ ಸಂಭಾಷಣೆಯಲ್ಲಿ ಸೊಳ್ಳೆಗಳಿರುವುದರಿಂದ ಇವರು ಕೊಳಗೇರಿಯಲ್ಲಿ ವಾಸಿಸುವ ಜನರಿರಬಹುದೇನೋ ಎನ್ನುವ ಊಹೆ ಕೂಡ ಬರಬಹುದು. ಆಗ ನಾವು ಪದ್ಯರಚನೆಯಾದ ಕಾಲಮಾನದಿಂದ ಕೂಡ ಸೂಕ್ಷ್ಮಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಪದ್ಯರಚನೆಯಾದ ಕಾಲಮಾನದಿಂದ ಸಲಹೆ ಪಡೆಯುವುದಾದರೆ, 350 ವರ್ಷಗಳ ಹಿಂದೆ ಪದ್ಯ ರಚನೆಯಾದಾಗ, ಮೇಲ್ವರ್ಗದ ಜನರ ಮನೆಯಲ್ಲೂ ಕೂಡ ಸೊಳ್ಳೆಗಳು ಸಾಮಾನ್ಯವಾಗಿದ್ದವು. ಹಾಗೆಯೇ ಇಲ್ಲಿ ಮಾತನಾಡುವ ಇಬ್ಬರೂ 'ನೀತಿ', 'ಮರ್ಯಾದೆ' ಇಲ್ಲದ ಅಶ್ಲೀಲ ಜನರಿರಬಹುದೇನೋ ಅನ್ನುವ ಶಂಕೆ ಕೂಡ ಬಾರದಿರದು. ಇಂತಹ ಸೂಚನೆ, ನಿರೀಕ್ಷೆ ಓದುಗನ ನೀತಿ, ಧರ್ಮ ಹಾಗು ತತ್ವಗಳ ಮೇಲೆ ನಿರ್ಧರಿತವಾಗಿರುತ್ತದೆಯೇ ಹೊರತು ಪದ್ಯದಲ್ಲಿ ಧ್ವನಿತವಾಗಿದ್ದಲ್ಲ. ಓದುಗ ಅಂದುಕೊಂಡಿರುವ ಅಭಿಪ್ರಾಯಗಳನ್ನು ಕವಿಯ ಅಭಿಪ್ರಾಯಗಳೆಂದು ಬಿಂಬಿಸುವಂತಿಲ್ಲ. ಅವು ತಪ್ಪಾಗಿ ಸೂಚಿಸಲ್ಪಡುತ್ತವೆ.

ಸಾಹಿತ್ಯ ಒಂದು ಪರೋಕ್ಷ ಸಂಭಾಷಣೆ, ವ್ಯಾಖ್ಯಾನ. ಭಾಷೆಯು ಸ್ವಾಭಾವಿಕ, ಅಂತರ್ಜಾತ ಅಥವಾ ಪರೋಕ್ಷ ಅರ್ಥಗಳನ್ನು ಪಡೆಯಬೇಕಾದರೆ ಪದಗಳ ವಾಚ್ಯ ಅರ್ಥಗಳಿಗೆ ಸೀಮಿತವಾಗುವುದನ್ನು ನಿಲ್ಲಿಸಬೇಕಾಗುತ್ತದೆ. ಹಾಗಂತ ಇದು ಬೇಜವಾಬ್ದಾರಿ ಅಲೆದಾಟವಲ್ಲ. ಬದಲಾಗಿ ನಮ್ಮ ಸುತ್ತಾಟ ಪದಗಳು ಮತ್ತು ಸನ್ನಿವೇಶದ ಬಿಗಿಹಿಡಿತದ ವ್ಯಾಪ್ತಿಯಲ್ಲೇ ಚಲಿಸುವಂತಿರಬೇಕು. ಪದ್ಯಗಳು ಬರೀ ಸುದ್ದಿ ಅಥವಾ ಮಾಹಿತಿಯಲ್ಲ. ಹಾಗಾಗಿದ್ದರೆ ಅವೂ ಕೂಡ ಸಮಾಜಶಾಸ್ತ್ರವೋ, ಇತಿಹಾಸವೋ ಆಗಬೇಕಾಗಿತ್ತು. ಸುದ್ದಿ ಅಥವಾ ವಿಷಯವನ್ನು ಪದ್ಯದಷ್ಟು ಸುಂದರವಾಗಿ ಭಾಷೆ ಹಾಗು ರೂಪಕದ ಸಂಪನ್ಮೂಲಗಳನ್ನು ಬಳಸಿಕೊಂಡು ಹೇಳುವ ಮಾಧ್ಯಮ ಇನ್ನೊಂದಿಲ್ಲ. ಸಾಮಾನ್ಯವಾದದ್ದನ್ನು ಅಸಾಮಾನ್ಯವನ್ನಾಗಿಸುವ ಸಾಮರ್ಥ್ಯ ಪದ್ಯಗಳಿಗೇ ಇರುವುದು. ಪದ್ಯಗಳು ತಾವು ಹೇಳುವುದಕ್ಕಿಂತ ಓದುಗರು ಅರ್ಥೈಸಿಕೊಳ್ಳಲಿ ಎನ್ನುವುದು ಹೆಚ್ಚು. ಓದುಗನಿಗೆ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವುದು ಏಕಾಗ್ರತೆಯಿಂದ ನೋಡಿದಾಗ ಮತ್ತು ಕೇಳಿದಾಗ ಮಾತ್ರ, ಏಕಾಗ್ರತೆಯಿಂದ ಚರ್ಚಿಸುವಾಗ ಓದುಗರಿಗೆ ಪದ್ಯದಲ್ಲಿ ಹೇಳಿರುವುದಕ್ಕಿಂತ ಹೆಚ್ಚಿನದನ್ನು ಅನ್ವೇಷಿಸುತ್ತಿದ್ದೇವೆ ಎನ್ನುವುದು ತಿಳಿದು ಬರುತ್ತದೆ. Robert Frostನ ಪ್ರಸಿದ್ಧ ಕವಿತೆ 'Stopping by Woods on a Snowy Evening' ಅನ್ನು ಏಕಾಗ್ರತೆಯಿಂದ ನೋಡಿದಾಗ, ಕೇಳಿದಾಗ ಅರ್ಥಗಳು ಹೇಗೆ ಬಿಚ್ಚಿಕೊಳ್ಳುತ್ತವೆ ಎಂಬುದನ್ನು ತಿಳಿಯೋಣ.



Stooping by woods on a snowy evening
Whose woods these are I think I know
His house is in the village though;
He will not see me stopping here
To watch his woods fill up with snow.
My little horse must think it queer
To stop without a farm house near
Between the woods and frozen lake
The darkest evening of the year.
He gives his harness bells a stake
To ask if there is some mistake
The only other sound's the sweep
Of easy wind end downy flake
The woods are dark and deep,
But I have promises to keep

And miles to go
Before I sleep.
And miles to go
Before I sleep.

"ಈ ಕಾಡುಗಳು ಯಾರವು ಎಂಬುದನ್ನು ನಾನು ಬಲ್ಲೆ
ಅತನ ಮನೆ ಹಳ್ಳಿಯಲ್ಲಿದೆ.
ಕಾಡುಗಳಲ್ಲಿ ಚಳಿಗಾಲದಲ್ಲಿ ಮಂಜು ತುಂಬುವುದನ್ನು ನೋಡಲು
ನಾನು ನಿಂತಿದ್ದೇನೆ ಎನ್ನುವುದನ್ನು ಅವನು ನೋಡುವುದಿಲ್ಲ
ಕಾಡಿನ ಮಧ್ಯ, ಮಂಜುಗಟ್ಟಿದ ಸರೋವರ
ವರ್ಷದ ಅತೀ ಕತ್ತಲಿನ ಸಂಜೆಯ ದಿನ
ತೋಟದ ಮನೆಯಲ್ಲಲದೆ ಇಲ್ಲಿ ನಿಲ್ಲಿಸಿರುವುದನ್ನು ನೋಡಿ
ನನ್ನ ಕುದುರೆ ಆಶ್ಚರ್ಯ ಪಡಬಹುದು.
ಏನಾದರೂ ತಪ್ಪಾಯಿತೇ ಎಂದು ಕೇಳಲು
ತನ್ನ ಕೊರಳಿಗೆ ಕಟ್ಟಿರುವ ಗಂಟೆಯನ್ನೊಮ್ಮೆ ಅಲುಗಾಡಿಸಿತು.
ಇಷ್ಟು ಬಿಟ್ಟು ಅಲ್ಲಿರುವ ಇನ್ನೊಂದು ಶಬ್ದವೆಂದರೆ
ಸಲೀಸಾಗಿ ಬೀಸುವ ಗಾಳಿ ಮತ್ತು ಹರಿಯುತ್ತಿರುವ ಸರೋವರ.
ಕಾಡುಗಳು ಸುಂದರವಾಗಿವೆ, ಕಪ್ಪಾಗಿವೆ ಮತ್ತು ದಟ್ಟವಾಗಿವೆ,
ಆದರೆ ನನಗೆ ಆಣೆಗಳವೆ ನೆರವೇರಿಸಲು
ನಾನು ಮಲಗುವ ಮುನ್ನ ಹಲವಾರು ಮೈಲಿಗಳನ್ನು ಕ್ರಮಿಸಬೇಕಿದೆ.
ಹಲವಾರು ಮೈಲಿಗಳನ್ನು ಕ್ರಮಿಸಬೇಕಿದೆ.

ಕಾಡಿನಲ್ಲಿ ಚಳಿಗಾಲದಲ್ಲಿ ಮಂಜು ತುಂಬುವ ಪ್ರಕೃತಿ ಸೌಂದರ್ಯವನ್ನು ಸವಿಯಲು ಕವಿಯು ಕಾಡಿನ ಮಧ್ಯ ನಿಲ್ಲುತ್ತಾನೆ ಎಂದಷ್ಟೇ ಅರ್ಥ ಮಾಡಿಕೊಂಡರೆ ಪದ್ಯದ ಶಕ್ತಿಯನ್ನು ಸೀಮಿತಗೊಳಿಸಿದಂತಾಗುತ್ತದೆ. ಪದ್ಯವನ್ನು ಸೀಮಿತಗೊಳಿಸುವವರಿಗೆ ಪದ್ಯದಲ್ಲಿ ಬರುವ 'ಯಜಮಾನ', 'ಪ್ರಮಾಣಗಳು', 'ಕುದುರೆ' ಎಂಬ ಪದಗಳು ಪದ್ಯಕ್ಕೆ ಏನು ಕೊಡುಗೆ ಕೊಡುತ್ತವೆ ಎಂದು ಕೇಳಿದರೆ ಅವರು ಗಲಿಬಿಲಿಗೊಳ್ಳುತ್ತಾರೆ. ಮೊದಲಿಗೆ ಓದುಗರು ಕವಿಯು ಏಕೆ ನಿಂತ ಎನ್ನುವುದನ್ನು ಸ್ಥಿರಪಡಿಸಿಕೊಳ್ಳಬೇಕಾಗುತ್ತದೆ; ಪ್ರಕೃತಿ ಆಸ್ವಾದಿಸಲು ಎಂದಿಟ್ಟುಕೊಳ್ಳೋಣ. ಕಾಡಿನ ಯಜಮಾನ ನನಗೆ ತುಂಬಾ ಪರಿಚಯವಿದ್ದಾನೆ ಎಂದು ಕವಿ ಹೇಳುತ್ತಾನೆ. ಹಾಗಾದರೆ ಒಡೆಯನೇಕೆ ಈತನನ್ನು ನೋಡುವುದಿಲ್ಲ ಹಾಗು ಕವಿ ಯಾಕೆ ಅವನ ಬಳಿ ಹೋಗುವುದಿಲ್ಲ? ಯಜಮಾನ ಪರಿಚಯವಿದ್ದಲ್ಲಿ ಕಾಡಿನ ಸೌಂದರ್ಯವನ್ನು ಆಸ್ವಾದಿಸಲು ಏಕೆ ನಿರಾಕರಿಸುತ್ತಾನೆ. ಈ ಯಾವ ಪ್ರಶ್ನೆಗೂ ಉತ್ತರವಿಲ್ಲದೆ ವಿಷಯಾಂತರವಾಗುತ್ತದೆ. ಕವಿಯು ಕುದುರೆಯ ಬಗ್ಗೆ ಮಾತಾಡುತ್ತಾನೆ. ಕುದುರೆ ತನ್ನ ಗಂಟೆಗಳಿಂದ 'ದಾರಿ ತಪ್ಪಿಲ್ಲವೇ?' ಎಂದು ಕೇಳುತ್ತದೆ. ಮತ್ತೊಮ್ಮೆ ವಿಷಯಾಂತರವಾಗುತ್ತದೆ. ಕವಿಯು ತಾನು ನೆರವೇರಿಸಬೇಕಿರುವ ಆಣೆ ಪ್ರಮಾಣಗಳು, ಕರ್ತವ್ಯಗಳ ಬಗ್ಗೆ ನೆನಪಿಸಿಕೊಳ್ಳುತ್ತಾನೆ. ಹಾಗಾಗಿ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸಲು ಬಂದ ಕವಿಯನ್ನು ಕರ್ತವ್ಯಗಳು ವಿಚಲಿತನನ್ನಾಗಿ ಮಾಡುತ್ತವೆ. ಕವಿಯ ಮನಸ್ಸಿನಲ್ಲಿ ಸೌಂದರ್ಯ ಅನುಭೂತಿ ಹಾಗು ಪ್ರತಿನಿತ್ಯದ ತುರ್ತುಗಳು, ಪ್ರಮಾಣಗಳ ನಡುವೆ ತಿಕ್ಕಾಟ ಏರ್ಪಡುತ್ತದೆ. ಈ ಸೌಂದರ್ಯದ ಮತ್ತಿನಲ್ಲಿ ಮಲಗುವ ಮುಂಚೆ ಕರ್ತವ್ಯಗಳನ್ನು ನೆನಪಿಸಿಕೊಳ್ಳಬೇಕೆಂಬ ಎಚ್ಚರಿಕೆ ಉಂಟಾಗುತ್ತದೆ.

'before I sleep' ಎನ್ನುವ ವಾಕ್ಯದ ಮೊದಲು ಬರುವ 'The woods are lovely, dark and deep' ವಾಕ್ಯವು ಕಾಡಿನ ಸೌಂದರ್ಯವನ್ನು ಉಲ್ಲೇಖಿಸುತ್ತದೆ. ಕಾಡಿನ ಸೌಂದರ್ಯ ಹಾಗು ನಿದ್ದೆಯ ಸೌಂದರ್ಯಗಳೆರಡೂ ಒಂದೇ ಆಗಿವೆ. 'before I sleep' ಎನ್ನುವ ವಾಕ್ಯ ಎರಡು ಭಾರಿ ಪುನರುಚ್ಚರಿಸಿರುವುದರಿಂದ ಕವಿಯು ಸೌಂದರ್ಯದ ಮತ್ತಿನಲ್ಲಿ ನಿದ್ದೆಗೆ ಜಾರಿದನೆಂಬುದನ್ನು ಊಹಿಸಬಹುದಾಗಿದೆ. ■

– ಕೆ.ಬಿ.ಜ್ಯೋತಿ
ಸ.ಪ್ರ.ದ. ಕಾಲೇಜು, ಗುಬ್ಬಿ
jyogowdev@gmail.com

ಆಧಾರ:

1.Beaty Jerome, Matchett.H.William, "Poetry", Oxford University Press, Newyork 1965.
2. Eagleton Terry, "How to read a Poem", Maiden, M.A USA, Blackwell, 2007.

# ಶ್ರಮಸಂಸ್ಕೃತಿ ಮತ್ತು ಬದುಕು

"ಸಾಹಸಕ್ಕೆ ಇಳಿಯಬಲ್ಲ ಮನಸ್ಸು ಹಾಗು ಸಂತಸ ಚಿಮ್ಮಬಲ್ಲ ಶಕ್ತಿಗಳೆರಡನ್ನೂ ಕೊಂದು ಹಾಕುವ ಭಯಂಕರ ಶಕ್ತಿ ಪ್ರತ್ಯೇಕವಾದಿ ಮನೋಭಾವಕ್ಕೆ ಇದೆ."

– ಡಾ ರಾಮ ಮನೋಹರ್ ಲೋಹಿಯಾ



ಪ್ರತ್ಯೇಕತಾವಾದಿ ಮನಃಸ್ಥಿತಿ ಯಾವುದೇ ಮನುಷ್ಯನ ಅಧೋಗತಿಗ ಕಾರಣವಾಗುವುದು. ಅದರಲ್ಲಿ ಜಾತಿ, ವರ್ಣ, ವರ್ಗ, ಬಡವ-ಬಲ್ಲಿದ, ರಾಷ್ಟ್ರ ಭೇದಗಳ ಬೀಜ ಗಳಿರುತ್ತವೆ. ಪ್ರತ್ಯೇಕ ವಾದಿಗಳು ಕಾನೂನಿನ ಬೆಂಬಲ ಪಡೆದು ನೆಲ, ಜಲ, ವಿದ್ಯುತ್, ಸಾರಿಗೆ, ಮಾನವನ ಶ್ರಮಶಕ್ತಿಯನ್ನು ತಮ್ಮ ಸ್ವಲಾಭಕ್ಕೆ ಬಳಸಿಕೊಳ್ಳುತ್ತಾರೆ. ಅವರ ವಿಶೇಷ ಸ್ಥಾನಮಾನ, ಘನತೆ, ಗೌರವ, ಅಧಿಕಾರ, ಖಾಸಗೀ ಬಂಡವಾಳದ ಒಡೆಯರಾಗುವ ಅಪೇಕ್ಷೆ ಇರುತ್ತದೆ. ಅದಕ್ಕೆ ತಕ್ಕಂತಹ ವ್ಯವಸ್ಥೆ ರೂಪಿಸಿಕೊಳ್ಳುವ ಯಾವುದನ್ನಾದರೂ, ಯಾರನ್ನಾದರೂ ಬಳಸಿಕೊಳ್ಳುವ ಚಾಣಾಕ್ಷತನ ವಿರುತ್ತದೆ. ತಮಗೆ ಬೇಕಾದ್ದನ್ನು ಶ್ರಮವಹಿಸಿ ಗಳಿಸಿಕೊಳ್ಳಲು ಸಾಧ್ಯವಾಗದಿದ್ದರೆ ತಾವು ಅದೃಷ್ಟಶಾಲಿಗಳು, ಕೊಟ್ಟು ಹುಟ್ಟಿದವರು, ತಮ್ಮ ಹುಟ್ಟು ಹಾಗು ತಾವು ಮಾಡುವ ವೃತ್ತಿ ಶ್ರೇಷ್ಠವೆಂಬ ಅವೈಜ್ಞಾನಿಕ, ಅವಾಸ್ತವ ಮಾರ್ಗ ಹಿಡಿಯುತ್ತಾರೆ. ಬಹುಸಂಖ್ಯಾತರಿಗೆ ಅರ್ಥವಾಗದ ಭಾಷೆಯಲ್ಲಿ ಆಡಳಿತ ಮಾಡುವುದು, ಯಂತ್ರ, ಮಂತ್ರ, ಶಾಸ್ತ್ರ, ಧರ್ಮೋಪದೇಶ ಅಲ್ಲಿರುತ್ತದೆ.

ಭಾರತರತ್ನ, ನೊಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯ ಸೇನ್ ಅವರ ಅಭಿಪ್ರಾಯದಲ್ಲಿ, "ಚೀನಾ ದೇಶವು ದುಸ್ಥಿತಿಯಲ್ಲಿರುವ ಶ್ರಮಿಕರಿಗೆ ನೆರವು ನೀಡುತ್ತಲೇ ಅವರಿಂದ ಉತ್ಪಾದನೆಯನ್ನೂ ನಿರೀಕ್ಷಿಸುತ್ತದೆ, ಆದರೆ ಅದು ನಮ್ಮ ದೇಶದಲ್ಲಿ ಏಕಿಲ್ಲ?"ದುಡಿದಲ್ಲದೇ ತಿನ್ನುವುದಿಲ್ಲ, ಕೈಯೊಡ್ಡಿ ಬೇಡುವುದಿಲ್ಲ ಎಂಬ ಸಂಸ್ಕೃತಿ ಪರಂಪರೆಯ ಭಾರತೀಯ ಮನೋಧರ್ಮ ಏನಾಗುತ್ತಿದೆ? ಇತ್ತೀಚಿನ ಕೆಲವು ವರ್ಷಗಳಲ್ಲಿ 17 ಲಕ್ಷ ಹೆಕ್ಟೇರ್ ಕೃಷಿ ಭೂಮಿಯನ್ನು ಅಭಿವೃದ್ಧಿ ಹೆಸರಿನಲ್ಲಿ ಕಾರ್ಪೊರೇಟ್ ವಲಯ ಕಿತ್ತುಕೊಂಡಿದೆ. ಅನ್ನ ಕೊಡುವವರ ಭೂಮಿಯನ್ನು ಕಿತ್ತುಕೊಂಡು ಅನ್ನದ ಭಿಕ್ಷೆ ನೀಡುತ್ತಿರುವುದು ರೈತರ ಮಾನವಂತ ಬದುಕನ್ನೇ ಕಿತ್ತುಕೊಂಡಂತೆ. ಪರಿಸ್ಥಿತಿಯನ್ನು ಅರ್ಥೈಸಿಕೊಂಡು ಎದುರಿಸಿ ನಿಲ್ಲುವ ಸಾಮರ್ಥ್ಯ ತೋರಲಾಗದ ಲಕ್ಷಾಂತರ ರೈತರು ಆತ್ಮಹತ್ಯೆಯ ದಾರಿ ಹಿಡಿದಿದ್ದಾರೆ.



ಸುಖೀರಾಜ್ಯ ಕಲ್ಪನೆಯ ಸ್ವತಂತ್ರ ಭಾರತದಲ್ಲಿ ಇಂದು ಕಾರ್ಪೋರೇಟ್ ವಲಯ ಮತ್ತು ಬಂಡವಾಳಶಾಹಿಗಳ ಆಶಯದಂತೆ ಆಯ್ದ ಜನರಿಗೆ ಭೋಗಲಾಲಸೆಯ ರಾಜ್ಯ ನಿರ್ಮಾಣವಾಗುತ್ತಿದೆ. ಬಡವ ಬಲ್ಲಿದರ ಅಂತರ ಹೆಚ್ಚುತ್ತಿದೆ. ಗ್ರಾಮಸ್ವರಾಜ್ಯದ ಕನಸು ಕಂಡ ಗಾಂಧೀಜಿಯ ಆಶಯ ಸಾಯುತ್ತಿದೆ. ಸ್ವತಂತ್ರ ಪೂರ್ವ ಭಾರತದಲ್ಲಿ ಜಾತಿ ಭೇದವೆಂಬ ಅನಿಷ್ಟವಿತ್ತು. ಸ್ವಾತಂತ್ರ ಮತ್ತು ಅಕ್ಷರ ಶಿಕ್ಷಣವಿಲ್ಲದಿದ್ದರೂ ಬದುಕಿನ ಮೂಲದ ಅನುಭವ ಜನ್ಯ ಜ್ಞಾನವಿತ್ತು. ಗ್ರಾಮಗಳು ಸ್ವಾವಲಂಬಿಗಳಾಗಿದ್ದವು, ಹಳ್ಳಿಗಳಲ್ಲಿ ವಿವಿಧ ಬಗೆಯ ಪರಸ್ಪರ ಅವಲಂಬಿತ ಉದ್ಯೋಗಗಳಿದ್ದವು. ಜಾನಪದ ಸಾಹಿತ್ಯ, ನೃತ್ಯ, ಸಂಗೀತ, ವಿವಿಧ ಕಲೆಗಳು, ಸಂಸ್ಕೃತಿ,

ಕ್ರೀಡೆ, ವೈವಿಧ್ಯಮಯ ಜೀವನ ಕ್ರಮ ಹಾಸುಹೊಕ್ಕಾಗಿತ್ತು. ಶ್ರಮ ಸಂಸ್ಕೃತಿಯಿಂದ ಪಡೆಯಬಹುದಾದ ಸೀಮಿತ ಆರೋಗ್ಯ ನೆಮ್ಮದಿ ಅವರದಾಗಿತ್ತು.

ಕಾರ್ಪೋರೇಟ್ ವಲಯದ ಕಡಿವಾಣವೇ ಇಲ್ಲದ ಮಾರುಕಟ್ಟೆ ಆಧಾರಿತ ಪ್ರಗತಿ ಮನುಷ್ಯನ ಘನತೆ, ಮಾನವೀಯತೆ, ನೈತಿಕ ಮೌಲ್ಯಗಳನ್ನು ಕಸಿಯುತ್ತಿದೆ. ಪರಿಸರವನ್ನು ದುರುಪಯೋಗ ಪಡಿಸಿಕೊಳ್ಳುತ್ತಿದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸ್ವಯಂಚಾಲಿತ ಅಟ್ಲಾಸ್ ಹೆಸರಿನ ಯಂತ್ರಮಾನವನ (ರೋಬೋಟ್) ಪ್ರವೇಶವಾಗುತ್ತಿದೆ. ಪರಿಣಾಮ ಅಮೇರಿಕಾದಲ್ಲಿ ಮಾನವ ಶ್ರಮದಾರಿದ್ರ್ಯ ಉಂಟಾಗಿದೆ. ಉದಾಹರಣೆಗೆ ಕೃಷಿಕರಿಗಿಂತ ದುಪ್ಪಟ್ಟು ಕಳ್ಳಕಾಕರರು, ದರೋಡೆಕೋರರು, ಮಾನಸಿಕ ಅಸ್ವಸ್ಥರು ಹೆಚ್ಚುತ್ತಿದ್ದಾರೆ. ಅದಕ್ಕನುಗುಣವಾಗಿ ಜೈಲುಗಳು ಹೆಚ್ಚುತ್ತಿವೆ. ಅಪಾರ ಜನಸಂಖ್ಯೆಯುಳ್ಳ ಭಾರತ, ಮಾನವ ಶಕ್ತಿಯನ್ನು ಸದುಪಯೋಗ ಮಾಡಿಕೊಳ್ಳದೆ ಪಾಶ್ಚಾತ್ಯ ರಾಷ್ಟ್ರಗಳ ಅನುಕರಣೆ ಮಾಡಿ ಯಾಂತ್ರಮಾನವರನ್ನು ಆಹ್ವಾನಿಸುವ ಆಶಯ ಕಾರ್ಪೊರೇಟ್ ವಲಯದಲ್ಲಿ ಕಂಡು ಬರುತ್ತಿದೆ. ಅದಕ್ಕೆ ಪೂರಕವಾಗುವಂತೆ ಆಳುವ ಸರ್ಕಾರಗಳೂ ನೀತಿನಿಯಮಗಳನ್ನು ರೂಪಿಸುತ್ತಿವೆ.

ಬಡವರ ಸಂರಕ್ಷಣೆಯ ಹೆಸರಿನಲ್ಲಿ ಪುಕ್ಕಟೆ ಆಹಾರ ಮತ್ತಿತರ ಸೌಲಭ್ಯವನ್ನು ಸರ್ಕಾರವೇ ಒದಗಿಸಿದರೆ ಅದು ವೋಟ್ ಬ್ಯಾಂಕ್ ರಾಜಕಾರಣ ವಾಗುತ್ತದೆಯೆಂದು ನಾಗೇಶ್ ಹೆಗಡೆ ಹೇಳುತ್ತಾರೆ. (ಪ್ರಜಾವಾಣಿ 18-7-13) ಅದ್ದರಿಂದ ಭಾರತದಲ್ಲೂ ಕೂಡ ಅಮೇರಿಕಾದಲ್ಲಿದ್ದಂತೆ ಶ್ರಮಿಕರು, ಕೃಷಿಕರು ಕಡಿಮೆಯಾಗಿ, ಜೈಲುಗಳನ್ನು ಹೆಚ್ಚಾಗಿ ನಿರ್ಮಿಸಬೇಕಾಗುತ್ತದೆ. ಸಧ್ಯಕ್ಕೆ ಅವರವರ ಮನೆಗಳಿಗೆ ಬಿಟ್ಟಿ ಊಟ ಕೊಡುತ್ತಿದ್ದೇವೆ, ಮುಂದೆ ಜೈಲಿನಲ್ಲಿ ಊಟ ಕೊಡುತ್ತೇವೆ ಎಂದು ಸಮಾಧಾನ ಪಟ್ಟುಕೊಳ್ಳಬಹುದು. ಈ ಸಂದರ್ಭದಲ್ಲಿ ಆಸ್ಟ್ರೇಲಿಯದ ಒಂದು ಪ್ರಸಂಗ ನೆನಪಿಸಿಕೊಳ್ಳಬಹುದು. ಯುರೋಪಿನವರು ಆಸ್ಟ್ರೇಲಿಯಾವನ್ನು ವಸಾಹಾತು ಮಾಡಿಕೊಂಡಾಗ ಅಲ್ಲಿನ ಮೂಲನಿವಾಸಿಗಳಿಗೆ ಎಲ್ಲವನ್ನೂ ಪುಕ್ಕಟೆ ಕೊಟ್ಟು ಅವರಿಂದ ಶ್ರಮಸಂಸ್ಕೃತಿಯನ್ನು ದೂರಾಗಿಸಿದರು. ಪರಿಣಾಮ ಕಾಲಕ್ರಮದಲ್ಲಿ ಮೂಲ ನಿವಾಸಿಗಳು ನಶಿಸಿಯೇ ಹೋದರು. ಅಸಂಖ್ಯಾತ ಭಾರತೀಯರಲ್ಲಿ ಶ್ರಮ ಸಂಸ್ಕೃತಿಯನ್ನು ದೂರಮಾಡಿದರೆ ಪರಿಣಾಮ ಊಹಿಸಲೂ ಸಾಧ್ಯವಿಲ್ಲ. ದೈಹಿಕವಾಗಿ ಮಾನಸಿಕವಾಗಿ ಯಾವುದೇ ಅಂಗಾಂಗಗಳನ್ನು ಬಳಸದಿದ್ದರೆ ಅವು ನಶಿಸಿಯೇ ಹೋಗುತ್ತವೆ. ಬದುಕುವ ಸಾಮರ್ಥ್ಯವೇ ಇಲ್ಲದಾಗುತ್ತದೆ.

– ಕೆ.ಆರ್. ಬಸವರಾಜು



:ವಿಶೇಷ ಸೂಚನೆ:

ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಲು ಇಚ್ಛಿಸುವವರು ನುಡಿ ತಂತ್ರಾಂಶದಲ್ಲಿ ಟೈಪ್ ಮಾಡಿದ ಲೇಖನಗಳನ್ನು

**prathispandha@gmail.com**

ಗೆ ಕಳುಹಿಸಬಹುದು.

ಅನುವಾದ/ ವಿಮರ್ಶೆ

# ಕಾವ್ಯತತ್ವವನ್ನು ಬಳಸುವ ಮುನ್ನ...

ಕಾವ್ಯದ ಮೂಲ ತತ್ವವನ್ನು ಗ್ರಹಿಸಿ ಆ ಮೂಲಕ ಸಾಹಿತ್ಯ ಕೃತಿಗಳನ್ನು ವಿಶ್ಲೇಷಿಸಲು ಪ್ರಯತ್ನಿಸುವುದು ವಿಮರ್ಶಕರು ಹಿಡಿಯುವ ಜಾಡು. ಹದಿನೇಳನೇ ಶತಮಾನದದ ಹೊತ್ತಿಗೆ 'Wit' ಎಂದು ಗುರುತಿಸಲಾಗುತ್ತಿದ್ದ ಕಾವ್ಯ ತತ್ವದೊಂದಿಗೆ ಕವಿಯ ಕಾಲ್ಪನಿಕ ಶಕ್ತಿಯನ್ನು ಸಮೀಕರಿಸಲಾಗುತ್ತಿತ್ತು. ಕಲ್ಪನೆಯೊಂದು ಗ್ರಹಿಕೆ; ಗುರುತಿಸಲೇ ಅಸಾಧ್ಯವಾದ ಸಾಮ್ಯತೆಗಳನ್ನು ಭಿನ್ನ ವಸ್ತುಗಳಲ್ಲಿ ಕಾಣಿಸುವ ಶಕ್ತಿ. ಸೃಜನಶೀಲತೆಯ ಈ ಆಯಾಮಕ್ಕೆ ಮೆಟಾಫಿಸಿಕಲ್ ಕವಿಗಳ ಕಾವ್ಯದಲ್ಲಿ ಹೆಚ್ಚಿನ ಮಹತ್ವ ದೊರೆಯಿತು. ತಮ್ಮೆಲ್ಲಾ ಭಾಷಿಕ ಸಂಪನ್ಮೂಲಗಳಿಂದ ಸಾಮಾನ್ಯ ನೋಟಗಳಿಗೆ ಅಸಾಧ್ಯವಾದ ವೈರುಧ್ಯಗಳನ್ನು ಒತ್ತಾಯ ಪೂರ್ವಕವಾಗಿ ಒಪ್ಪಿಸುವ ಪ್ರಯತ್ನಗಳನ್ನು ಕವಿಗಳು ಮಾಡುತ್ತಿದ್ದರು. ತಮ್ಮ ವಾದಗಳನ್ನು ದೃಢೀಕರಿಸುವ ಸಲುವಾಗಿ ಹೆಚ್ಚು ಹೆಚ್ಚು ವಿಶ್ಲೇಷಣಾ ವಿಧಾನಗಳನ್ನು (analysis) ಕಾವ್ಯ ಪ್ರಯೋಗಗಳಲ್ಲಿ ಬಳಸಿಕೊಂಡಷ್ಟೂ ಸಂಯೋಜನಾತ್ಮಕ (synthesis) ಸೃಜನಶೀಲತೆ ಕುಂಠಿತಗೊಂಡಿತು. ವಿಶ್ಲೇಷಣೆಯು ಯಾವತ್ತೂ ತೀರ್ಮಾನಗಳನ್ನು ನಿರೀಕ್ಷಿಸುತ್ತದೆ ಆದರೆ ಕಾವ್ಯದಲ್ಲಿನ ಕಾಲ್ಪನಿಕತೆ ತೀರ್ಮಾನಗಳಿಗೆ ನಿಲುಕದು. Drydenನ ಪ್ರಕಾರ ಕಲ್ಪನೆಗೆ ಹತೋಟಿ (restraint) ಅವಶ್ಯಕ. ಯಾಕೆಂದರೆ ಈ ಸಾಮರ್ಥ್ಯ "So Wild and Lawless".

ಇಂದ್ರೀಯ ಜ್ಞಾನಕ್ಕೆ ಮೂಲವಾದದ್ದು ತಕ್ಷಣದ ಅನುಭವಕ್ಕೆ ಬರುವ ಮುಟ್ಟುವಿಕೆ, ರುಚಿ, ವಾಸನೆ ಯಂತಹ ಬಾಹ್ಯ ವಸ್ತುಗಳ ಪ್ರಚೋದನೆಗಳು. ತಕ್ಷಣದ ಪರಿಣಾಮಗಳನ್ನು ನೀಡುವಂತಹವು. ಈ ಹಸಿಯಾದ ಇಂದ್ರೀಯ ಅನುಭವಗಳನ್ನು 'Fancy' ಎನ್ನಬಹುದು. ನಿದ್ರೆಯಲ್ಲಿ ಕಂಡ ರಮ್ಯವಾದ ಕನಸುಗಳು ಎಚ್ಚರಗೊಳ್ಳುತ್ತಿದ್ದಂತೆ ಮರೆತುಹೋಗುವ ಹಾಗೆ ಈ ಅಲ್ಪಾವಧಿಯ ಕಲ್ಪನೆಯು ಸಹ ಮಂಜಿನಂತೆ, ಹೆಚ್ಚು ಕಾಲ ಬಾಳಲಾರದು. ಈ ತಕ್ಷಣದ ಅರವಳಿಕೆಯು ನಿಧಾನವಾಗಿ ನಶಿಸುತ್ತಿದ್ದಂತೆ, ಗತವಾಗಿ ಕೊಳೆಯುತ್ತಾ ಹೋದಂತೆ ಅದರ ನೆನಪನ್ನು ಗೊಬ್ಬರವಾಗಿಸಿಕೊಂಡು 'imagination' ಚಿಗುರುತ್ತದೆ. ಇದು ಕನಸಲ್ಲ. ಎಚ್ಚರವಾಗಿದ್ದಾಗಲೂ, ಓಡಾಡು ತ್ತಿರುವಾಗಲೂ, ಕನಸಿನಲ್ಲಿರುವಂತಹ ಸ್ಥಿತಿ. ಇದು ಥಾಮಸ್ ಹಾಬ್ಸ್ ನ ತಿಳಿವೇ ಆದರೂ ಸಹ ನೆನಪು ಮತ್ತು imagination ಎರಡೂ ಒಂದೇ ಸ್ಥಿತಿಯ ಭಿನ್ನ ಹೆಸರುಗಳು ಎನ್ನುತ್ತಾನೆ.

ಥಾಮಸ್ ಹಾಬ್ಸ್ ನಿಂದ ಪ್ರಭಾವಿತ ನಾಗಿದ್ದರೂ ಸಹ ಜೋಸೆಫ್ ಅಡಿಸನ್ imagination ನ ಅರ್ಥವಂತಿಕೆಯನ್ನು ಬೆಳಗುವಂತೆ ಕಟ್ಟಿಕೊಡುತ್ತಾನೆ. ಪ್ರಕೃತಿಯ ಹೋಲಿಕೆ ಕಲಾತ್ಮಕ ಅನುಕರಣೆಯಲ್ಲಿ ಹೆಚ್ಚು ಮನಮೋಹಕವಾಗಿದ್ದರೆ ಅಂತಹ ಅನುಕರಣೆಯು ಹೆಚ್ಚು ಆಹ್ಲಾದಕರವಾಗಿರುತ್ತದೆ ಎನ್ನುತ್ತಾನೆ. ಪ್ರಕೃತಿಗೆ ಕಲೆ ಸರಿಸಾಟಿ ಯಾಗಲಾರದಾದರೂ ಕಲೆ ಪ್ರಕೃತಿಯ ಅಂದವನ್ನು ಹೆಚ್ಚಿಸಬಲ್ಲದು. ಅಹಿತವಾದ ವಸ್ತುಗಳೂ ಸಹ ಯಥಾವತ್ತಾಗಿ ಕಲೆಯಲ್ಲಿ ಅನುಕರಣವಾಗಿದ್ದರೆ ಉಲ್ಲಾಸ ನೀಡುತ್ತವೆ. ಓದುಗರ ಮನ ಒಪ್ಪಿಸುವ ಗುಣವು imagination ನ ಮುಖ್ಯವಾದ ಲಕ್ಷಣ. ಆದ್ದರಿಂದಲೇ ಪ್ರಕೃತಿಯ ಅನೇಕ ವಸ್ತುಗಳ ವಿವಿಧ ರೀತಿಯ ಪ್ರತಿನಿಧಿಕರಣಗಳನ್ನು ಕಲೆಯಲ್ಲಿ ಗುರುತಿಸುವುದು ಸಾಧ್ಯ. ವಿಸ್ಮಯವು ಕಲಾತ್ಮಕ ಸಂತೋಷದ ಒಂದು ಅಂಶ. ಮೆಟಾಫಿಸಿಕಲ್ ಕವಿಗಳು ಬಲವಂತವಾಗಿ ರೂಪಕಗಳನ್ನು ಕೂಡಿಸಿ ದುಡಿಸಿಕೊಳ್ಳುವ ಕಾವ್ಯ ರೀತಿಯನ್ನು ಅಡಿಸನ್ ಒಪ್ಪುವುದಿಲ್ಲ. ಅರ್ಥಮಾಡಿಕೊಂಡು, ಯೋಚನೆಯ ಶಕ್ತಿಯಿಂದ ಸಂತೋಷಕೊಡುವ ಕಾವ್ಯಕ್ಕಿಂತ Fancyಯಿಂದ ದೊರೆಯುವ ಆನಂದವೇ ಉತ್ತಮ ಎನ್ನುತ್ತಾನೆ. ನೋಟದಿಂದ ದೊರೆಯುವ ಇಂದ್ರೀಯ ಅನುಭವದಲ್ಲಿ imagination ಸಮೃದ್ಧವಾಗಿರುತ್ತದೆ.

ಪ್ರತಿಮೆಗಳನ್ನು ಆಧರಿಸಿ ತಿಳಿಸುವ ಮತ್ತು ವಿವರಿಸುವ ಶ್ರವಣ ಮತ್ತು ದರ್ಶನ ಇಂದ್ರೀಯಗಳಿಗೆ ಪ್ರಾಚೀನರ ಸೌಂದರ್ಯ ಮೀಮಾಂಸೆಯು ಹೆಚ್ಚಿನ ಮಹತ್ವ ನೀಡಿದೆ. ನೋಟದಿಂದ, ಸ್ಪರ್ಶದಿಂದ ಸಿಗುವ ಪ್ರಾಥಮಿಕ ಸ್ತರದ ಆನಂದವು ಬಾಹ್ಯ ಕಾರಣಗಳನ್ನು ಅವಲಂಬಿಸಿರುತ್ತದೆ. ಯಾವುದೇ ಬಾಹ್ಯ ಪ್ರಚೋದನೆ

ಗಳಿಲ್ಲದೆ, ಯಾವತ್ತೋ ಹಿಂದೆ ನೋಡಿದ/ ಅನುಭವಿಸಿದ ವಸ್ತುವಿನ ಕಲ್ಪನಾಬಿಂಬದ ನೆನಪನ್ನು ಆಧರಿಸಿ ಭಾವನೆಗಳನ್ನು ಉದ್ದೀಪಿಸುವ ಹಾಗೆ ಕಟ್ಟಿಕೊಡುವ ಸಾಮರ್ಥ್ಯವಿರುವುದು imagination ಗೆ ಮಾತ್ರ. ಇಂತಹ ಪ್ರಜ್ಞೆ ಮತ್ತು ನೆನಪುಗಳು ತತ್ವಜ್ಞಾನದ ರೀತಿಯಲ್ಲಿ ತರ್ಕದ ಮೂಸೆಯಿಂದ ಬಂದ ಜ್ಞಾನದಂತಲ್ಲದೇ ಹೋದರೂ ಸಹ ಎಲ್ಲಾ ಜೀವಿಗಳ ಸಹಜ ಜ್ಞಾನವಾಗಿರುತ್ತದೆ. ಆಹ್ಲಾದವನ್ನು ಉದ್ದೀಪಿಸುವ ಈ ಬಾಹ್ಯಕಾರಗಳನ್ನು ಎಡ್ಮಂಡ್‌ಬರ್ಕ[1] ಸೌಂದರ್ಯವೆನ್ನುತ್ತಾನೆ.

"ಸುಂದರವಾದ ವಸ್ತುಗಳು ಚಿಕ್ಕ ಗಾತ್ರವನ್ನು ಹೊಂದಿದ್ದು, ಮೃದುತ್ವ, ನವಿರಾದ ಭಾವನೆ, ಸ್ವಚ್ಚತೆ ಮತ್ತು ಚಲುವನ್ನು ಹೊಂದಿರುತ್ತವೆ. ಇಂದ್ರೀಯ ಅನುಭವಗಳ ಮೂಲಕ ಮಾನವರ ಬುದ್ಧಿಯನ್ನು ಯಾಂತ್ರಿಕವಾಗಿ ಪ್ರಭಾವಿಸಬಲ್ಲ ಈ ಗುಣವು ಸಾಂದ್ರ ವ್ಯವಸ್ಥೆಯಲ್ಲಿನ ಕಾಠಿಣ್ಯವನ್ನು ಸಡಿಲಗೊಳಿಸುತ್ತದೆ." ಸುಂದರವಾದದ್ದು ಭವ್ಯತೆಗೆ ಕಾರಣವಾಗುತ್ತದೆ. " ವಿಶಾಲವಾದ ಜಲಪಾತಗಳು, ಕೆರಳಿದ ಚಂಡಮಾರುತಗಳು, ಗುಡುಗು ಸಿಡಿಲು, ಭೋರ್ಗರೆವ ಘರಂಗಿಗಳು ಗಂಭೀರ ಭೀಷಣ ಸಂವೇದನೆಯನ್ನು ಮನಸ್ಸಿನಲ್ಲಿ ಜಾಗೃತ ಗೊಳಿಸುತ್ತವೆ. ಮೆಲುವಾದ ಆದರೆ ಮಹತ್ತರವಾದ ತಡೆದು ತಡೆದು ಬರುವ ಇಂತಹ ಶಬ್ದಗಳು.. ಭವ್ಯತೆಯನ್ನು ಉಂಟುಮಾಡುತ್ತದೆ."[2] ಬರ್ಕ ನ ಈ ಮಾತುಗಳನ್ನು ಸಮರ್ಥಿಸುವ ಕೇಮ್ಸ್ , " ಈ ಭಾವನೆಗಳನ್ನು ಉಂಟುಮಾಡುವ ವಸ್ತುವಿನ ಇರುವಿಕೆಯ ಮಾತ್ರದಿಂದಲೇ ನಾವು ಸಂತೃಪ್ತರಾಗುತ್ತೇವೆ, ಅವುಗಳ ಹಿಂದಿನ ಕಾರಣಗಳಿಂದಲ್ಲ." ಕಣ್ಣು ತೆರೆದ ತಕ್ಷಣ ಬೀಳುವ ದೃಶ್ಯಕ್ಕೆ ಕಲ್ಪನೆಯ ಬಣ್ಣ ಬಳಿಯುತ್ತಿದ್ದಂತೆಯೇ ಬುದ್ಧಿಯ ಪ್ರಯೋಗಕ್ಕೆ ಸ್ವಲ್ಪವೂ ಗಮನ ನೀಡದಂತೆ ಬೆರಗು ಆವರಿಸುತ್ತದೆ, ನೋಡಿದ ವಸ್ತುವಿನಲ್ಲಿನ ಪರಸ್ಪರ ಅನುರೂಪತೆಯನ್ನು ಗಮನಿಸಿದ ಮರುಕ್ಷಣವೇ ಕಾರಣ/ ಸನ್ನಿವೇಶಗಳನ್ನು ವಿಚಾರಿಸುವ ಗೋಜಿಗೆ ಹೋಗದೆ ಮನಸ್ಸು ಸಮ್ಮತಿ ಸೂಚಿಸುತ್ತದೆ ಎಂದು ಜೋಸೆಫ್ ಅಡಿಸನ್[3] ಬರೆಯುತ್ತಾನೆ.


ಜೋಸೆಫ್ ಅಡಿಸನ್

ಪ್ರಾಚೀನರು ಕಾವ್ಯವನ್ನು ವಾಕ್ ಕಲೆಯ ಜೊತೆ ಸಮೀಕರಿಸಿ ನೋಡುತ್ತಿದ್ದರು. ಕಾವ್ಯ ರಚನೆಯಲ್ಲಿನ ತಾಂತ್ರಿಕ ಅಂಶಗಳಿಗೆ ಹೆಚ್ಚು ಗಮನವನ್ನು ನೀಡಲಾಗಿತ್ತು. ಶಾಬ್ದಿಕ ಕಲೆಗಳಾದ ಭಾಷಣ ಕಲೆ ಮತ್ತು ಕಾವ್ಯ ರಚನೆಗೆ ಹೆಚ್ಚಿನ ಬೌದ್ಧಿಕ ಆಯಾಮವಿದ್ದುದರಿಂದ ಚಿತ್ರಕಲೆ ಮತ್ತು ಶಿಲ್ಪಕಲೆಗೆ ಕೆಳಮಟ್ಟದ ಸ್ಥಾನಮಾನಗಳಿದ್ದವು. ಆದರೆ ರಿನೆಸಾನ್ಸ್ ಕಾಲದ ಹೊತ್ತಿಗೆ ಚಿತ್ರಕಲೆ ಮತ್ತು ವಾಸ್ತುಶಿಲ್ಪಗಳ ರಚನೆಗೂ ಕೂಡ ಗಣಿತ ಮತ್ತು ಭೌತಿಕ ವಿಜ್ಞಾನದ ಅರಿವು ಅಂತ್ರಗತ್ಯ ಎಂಬ ತಿಳಿವು ಹೆಚ್ಚಾದಂತೆ, ಮತ್ತು ಕಾವ್ಯ ಕಲೆಯಂತೆಯೇ ಅವುಗಳ ಗುರಿ ಬೋಧನಾತ್ಮಕ ವಾಗಿದ್ದು, ಮಾನವರ ಭಾವನೆಗಳನ್ನು ವ್ಯಕ್ತಪಡಿಸುವ ಇಂಗಿತವನ್ನು ಹೊಂದಿದ್ದರಿಂದ ಕಾವ್ಯದಷ್ಟೇ ಮಹತ್ವವನ್ನು ಪಡೆದುಕೊಂಡವು. ಫ್ರೆಂಚ್ ಕವಿ Charles Alphones Du Fresnoy ನ ಪ್ರಕಾರ,

"ಕಾವ್ಯವೊಂದು ಚಿತ್ರವಿದ್ದಂತೆ: ಆದ್ದರಿಂದಲೇ ಚಿತ್ರವೂ ಸಹ ಕಾವ್ಯದಂತಿರಬೇಕು.........ಚಿತ್ರವೊಂದನ್ನು ಮೌನ ಕಾವ್ಯವೆಂದು ಕರೆಯಬಹುದಾದರೆ; ಕಾವ್ಯವು ಮಾತನಾಡುವ ಚಿತ್ರ." ಅರಿಸ್ಟಾಟಲ್ ಪ್ರಕಾರ ಪದ್ಯದ ನಕ್ಷೆಯು ಚಿತ್ರಗಳ ಗೆರೆಗಳಿದ್ದಂತೆ, ಪದವಿನ್ಯಾಸ ಮತ್ತು ರೂಪಕಗಳು ಬಣ್ಣಗಳಿದ್ದಂತೆ. ಅಗಸ್ಟನ್ ಕಾಲದ ವಿಮರ್ಶಕರು ಅರಿಸ್ಟಾಟಲ್ ನ ಈ ಹೋಲಿಕೆಗೆ ಹೆಚ್ಚು ಮಹತ್ವ ನೀಡಿದ್ದರಿಂದಲೇ ಅವರ ಕಾವ್ಯವು ಶಬ್ದಾಡಂಬರದಿಂದ ತುಂಬಿತ್ತು. ಇದನ್ನು ರೊಮ್ಯಾಂಟಿಕ್ ಕವಿಗಳು ಕಟುವಾಗಿ ವಿಮರ್ಶಿಸಿದರು. ಆದರೆ ಪದಗಳಿಗೆ ಪ್ರಕೃತಿಗೂ ಮಿಗಿಲೆನಿಸುವ ರೂಪಕಗಳನ್ನು ಸೃಷ್ಟಿಸುವ ಶಕ್ತಿಯಿರುವುದನಂತೂ ಅಲ್ಲಗಳೆಯಲಾಗದು. ಚಿತ್ರಕಲೆಗೆ ಸಾಧ್ಯವಾಗದ ಚಲನಶೀಲತೆಯನ್ನು ಕಾವ್ಯ ನೀಡಬಲ್ಲದು ಎನ್ನುವ ಲೆಸ್ಸಿಂಗ್ ನ ಅಭಿಪ್ರಾಯವನ್ನು ಒಪ್ಪಲೇ ಬೇಕು.



ಹದಿನೆಂಟನೇ ಶತಮಾನದ ಕಾವ್ಯವು ನ್ಯಾಯ ನಿರ್ಣಾಯಕದ ಹತೋಟಿಯಲ್ಲಿದ್ದ 'Fancy' ಗೆ ಹೆಚ್ಚು ಮಹತ್ವ ನೀಡಿ imagination ಅನ್ನು ನಗಣ್ಯವಾಗಿಸಿದ್ದವು. ಭಾವನೆಗಳಿಗೆ ಅಂಟಿ ನಿಲ್ಲುವುದು ಕಾವ್ಯ ತತ್ವ ಮತ್ತು ಕವಿಯು ಕೇವಲ ಭಾಷಾಪರಿವರ್ತನಕಾರ ಎಂದು ತಿಳಿಯಲಾಗಿತ್ತು. ಆದರೆ ಇದೇ ಕಾಲದಲ್ಲಿ 'ಜೀನಿಯಸ್' ಎಂದು ಪರಿಗಣಿತವಾಗಿದ್ದ ಕಾವ್ಯ ತತ್ವವನ್ನು ಮುಂದುವರೆಸುವ ಪರಂಪರೆಗೆ ಸೇರಿದ ಕೋಲಿರಿಡ್ಜ್ ಮತ್ತು ವರ್ಡ್ಸ್‌ವರ್ತ್ ಹೊಸ ವಿಶ್ವಗಳ ಅನ್ವೇಷಣೆ ಕಾವ್ಯ ಕಲ್ಪನೆಯಲ್ಲಿ ಸಾಧ್ಯ ಹಾಗು ಲಂಗುಲಗಾಮಿಲ್ಲದ ಸೃಜನಶೀಲ ಆವೇಗವು ಕಾವ್ಯದ ನಿಶ್ಚಿತ ಅನಿವಾರ್ಯವೆಂದು ಬಲವಾಗಿ ನಂಬಿದ್ದರು. Imagination ಅನ್ನು ಸತ್ಯ ಅರ್ಥ ಮಾಡಿಕೊಳ್ಳುವ ಶಕ್ತಿಯೆಂದು ಭಾವಿಸಿದರು. ಈ ಶಕ್ತಿಯು ಸಚೇತಕ ಮತ್ತು ಬದುಕಿಗೆ ಹತ್ತಿರವಾದದ್ದಲ್ಲದೆ ವಿಶ್ವ ಚೇತನಕ್ಕೆ ಹಿತವಾಗುವಂತಹದ್ದು. Imagination ರೂಪಿಸುವ ಪ್ರೇರಣೆಯಾದರೆ 'Fancy' ಆವಾಹಿಸುವ ಮತ್ತು ಸಂಯೋಜಿಸುವ ಕೆಲಸ ಮಾಡುತ್ತದೆ. ತಾಳ್ಮೆಯಿಂದ ಗಮನಿಸುವ ಶಕ್ತಿ ರೂಪಿಸುವ ಶಕ್ತಿಯನ್ನು ಹೆಚ್ಚಿಸಿದರೆ ಸಂಯೋಜನೆಯು ಸ್ವಪ್ರೇರಿತ ಚಟುವಟಿಕೆ. ಹದಿನೆಂಟನೇ ಶತಮಾನದ ನವ ಕ್ಲಾಸಿಕಲ್ ಪಂಥದ ಹಾಗು ಪ್ಯೂರಿಟಾನ್ ಧರ್ಮದ ಉಪದೇಶಾತ್ಮಕ ಸಂಪ್ರದಾಯವನ್ನು ಮಾದರಿಯಾಗಿ ಅನುಸರಿಸಿ ಕಾವ್ಯ ಸೃಷ್ಟಿಯಲ್ಲಿ ತಲ್ಲೀನರಾಗಿದ್ದ ಅಮೇರಿಕನ್ ಕವಿಗಳನ್ನು Edgar Allan Poe ತೀವ್ರವಾಗಿ ವಿಡಂಬಿಸುತ್ತಾನೆ. ಅಮೇರಿಕಾದಲ್ಲಿ ಸಾಹಿತ್ಯವನ್ನು ಭಾವನಾತ್ಮಕವಾಗಿ, ನೀತಿಪರವಾಗಿ ವಿಮರ್ಶಿಸುತ್ತಿದ್ದ ವಿಕ್ಟೋರಿಯನ್ ಮನಃಸ್ಥಿತಿಯ ವಿಮರ್ಶಕರು ಹೆಚ್ಚಾಗಿದ್ದರು. ಕಲೆಯು ಮನರಂಜನೆಗಾಗಿ, ಇಂದ್ರೀಯ ಸಂವೇದನೆಗಳ ಪ್ರಚೋದನೆಗಾಗಿ, ವ್ಯವಸ್ಥೆಯನ್ನು ಬುಡಮೇಲು ಮಾಡುವ ಕ್ರಾಂತಿಕಾರಕ ಶಕ್ತಿಯಾಗಿ ಸಂಶಯಕ್ಕೆ ಒಳಗಾಗಿತ್ತು.

ಕಾವ್ಯದ didactic ಕರ್ತವ್ಯವನ್ನು ತಿರಸ್ಕರಿಸಿದ Edgar Allan Poe ನ ವಿಮರ್ಶೆಯು ತನ್ನ ಸಮಕಾಲೀನರಿಗಿಂತ ಭಿನ್ನವಾದ, ಆಧುನಿಕತೆಗೆ ಹತ್ತಿರವಾದ ಕಾವ್ಯ ತತ್ವವಾಗಿದೆ. ಕಾವ್ಯವನ್ನು ಸೌಂದರ್ಯದ ಸ್ವರತರಂಗಗಳ ಸೃಷ್ಟಿ ಹಾಗು ರುಚಿವಿವೇಕವೇ ಅದರ ನಿರ್ಣಾಯಕವಾಗಿ ಸುಂದರವಾದದ್ದರ ಕುರಿತ ಪರಿಚಯ ನೀಡುತ್ತದೆ ಯೆಂದು ವ್ಯಾಖ್ಯಾನಿಸುತ್ತಾನೆ. ಭಾವೋದ್ರೇಕಗಳು ಆತ್ಮದ ಔನತ್ಯವನ್ನು ಸಾಧಿಸುವ ಬದಲು ಅದನ್ನು ಶಿಥಿಲಗೊಳಿಸುತ್ತವೆ. ಸುಂದರವಾದದನ್ನು ಧ್ಯಾನಿಸುತ್ತಾ ಹಿತವನ್ನು ನೀಡುವುದು ಕಾವ್ಯದ ಗುರಿ. ಭಾವಾತಿರೇಕಗಳಿಂದ ಹೃದಯಕ್ಕೆ ಅಮಲೇರಿದಂತೆಯೇ, ಸದಾ ವಿವೇಚನೆಯನ್ನು ಸಮಾಧಾನಪಡಿಸಲೆತ್ನಿಸುವ ಸತ್ಯವು ಕೂಡ ಕಾವ್ಯಕ್ಕೆ ಹತ್ತಿರವಾಗಲಾರದು. ನಿಷ್ಠುರತೆ, ಸ್ಪಷ್ಟತೆ, ಸಮಾಧಾನ ಚಿತ್ತಗಳು ಸತ್ಯದ ಲಕ್ಷಣಗಳು; ಆದರೆ ಕಾವ್ಯ ಪ್ರೇರಣೆಯನ್ನು ಈ ಭಾವಗಳು ಅಳಿಸಿಹಾಕುತ್ತವೆ. ಕಾವ್ಯದ ಮೂಲಾಂಶ ಸೌಂದರ್ಯವೇ ಹೊರತು ಸತ್ಯವಲ್ಲ ಎಂಬುದು ಪೋ ನ ಅಭಿಮತ. ಲೇಕ್ ಕವಿಗಳು, ವರ್ಡ್ಸ್‌ವರ್ತ್, ಎಮರ್ಸನ್‌ರ ಕಾವ್ಯಗಳು ನೀತಿ ಪಾಠಗಳಾಗಿದ್ದವು ಎಂಬ ಕಾರಣದಿಂದಲೇ ಎಡ್ಗರ್ ಅಲೆನ್ ಪೋ ಅವರನ್ನು ಜರಿಯುತ್ತಾನೆ.

ದೀರ್ಘ ಕಾವ್ಯಗಳು ಆತ್ಮದ ಉತ್ಕೃಷ್ಟ ಸ್ಥಿತಿಯನ್ನು ಹೆಚ್ಚು ಹೊತ್ತು ಕಾಯ್ದುಕೊಳ್ಳಲಾರವು. ಹಾಗೆಯೇ ಭಾವದ ಅಖಂಡತೆಯನ್ನು ಉಳಿಸಿಕೊಳ್ಳಲಾರವು. ಆತ್ಮೋನ್ನತಿಯ ಕ್ಷಣಗಳನ್ನು ಸೌಂದರ್ಯದ ಮೂಲಕ ತೋರಿಸುವುದರಿಂದ ಮಾನವರಿಗೆ ಅವರ ಘನತೆಯನ್ನು, ಅವರೊಳಗಿರಬಹುದಾದ ದೈವತ್ವವನ್ನು ಪರಿಚಯಿಸುವುದೇ ಕಾವ್ಯದ ಗುರಿ. ಪೋ ನೀಡುವ ವಿವರಣೆ ಅನುವಾದಕ್ಕೆ ನಿಲುಕದು:

"ಮಾನವರ ಚೇತನದ ಆಳದಲ್ಲಿ ಗುಪ್ತವಾಗಿ ನೆಲಸಿರುವ, ಚಿರಂಜೀವವಾದ ಸಹಜಪ್ರವೃತ್ತಿಯೇ ಸೌಂದರ್ಯದ ಪ್ರಜ್ಞೆ, ಬಹುಸ್ತರದ ರೂಪಗಳಲ್ಲಿ, ಶಬ್ದಗಳಲ್ಲಿ, ಗಂಧದಲ್ಲಿ, ರಸಭಾವಗಳ ನಡುವೆ ಹಿತವಾದ ಅನುಭವವನ್ನು ನೀಡುವಂತಹವು. ನೈದಿಲೆಯು ಕೊಳದಲ್ಲಿ ಪ್ರತಿಫಲಿಸುವಂತೆ, ಶರದೃತುವಿನ ಕಾಲದಲ್ಲಿ ಹೂ ಬಿಡುವ ಅ್ಯಮರಿಲೀಸ್ ಗಿಡದ ಕಣ್ಣುಗಳು ಕನ್ನಡಿಯಲ್ಲಿ ಹೊಳೆಯುವಂತೆ, ಭಾವ, ಶಬ್ದ, ಬಣ್ಣ, ಗಂಧ ರಸಗಳು ಆಹ್ಲಾದ ನೀಡುವ ಸಲುವಾಗಿ ಮಾತಿನ, ಬರಹರೂಪದ ಪದಗಳೆಂಬ ಕೃತಕ ಮೂಲಗಳನ್ನು ಆಶ್ರಯಿಸಿರುತ್ತವೆ... ಆದರೂ ತಣಿಸಲಾರದ ತೃಷೆ ಇನ್ನೂ ಇದೆ... ಈ ಬಯಕೆ ಮಾನವನ ಅಮೃತತ್ವಕ್ಕೆ ಸೇರಿದ್ದು. ಇದು ಏಕಕಾಲಕ್ಕೆ

ಬತ್ತದ ಅಸ್ತಿತ್ವದ ಸೂಚಕ ಮತ್ತು ಪರಿಣಾಮ. ಪತಂಗವು ನಕ್ಷತ್ರವನ್ನು ಬಯಸುವ ಬಯಕೆಯಿದು. ಕೇವಲ ಎದುರಿಗಿರುವ ಸೌಂದರ್ಯದ ಮೆಚ್ಚುಗೆಯಲ್ಲ ಇದು, ಆ ಸೌಂದರ್ಯವನ್ನು ತಲುಪುವ ವ್ಯರ್ಥ ಪ್ರಯತ್ನ. ಸಾವಿನಾಚೆಗಿನ ವೈಭೋಗಗಳ ಆನಂದಾತಿಶಯದ ದೂರದೃಷ್ಟಿಯಿಂದ ಪ್ರಭಾವಿಸಲ್ಪಟ್ಟು, ಕಾಲದ ಕುರಿತ ವಿಚಾರಗಳ ಬಹುರೂಪದ ಸಂಯೋಜನೆಗಳೊಂದಿಗೆ ಹೆಣಗಾಡುತ್ತೇವೆ, ನಿತ್ಯತೆಗೆ ಸಂಬಂಧಿಸಿದ ರಮ್ಯತೆಯ ಕೆಲವಂಶಗಳನ್ನಾದರೂ ಪಡೆಯಲುಯತ್ನಿಸುತ್ತೇವೆ." ವಿಶ್ವಚೇತನದೊಂದಿಗೆ ಕೂಡಲು ಬಯಸುವ ಈ ಮಾನವ ಸಹಜಪ್ರವೃತ್ತಿಯು ಚಿತ್ರಕಲೆ, ಶಿಲ್ಪಕಲೆ, ವಾಸ್ತುಶಿಲ್ಪ, ಚಿತ್ರ ತೋಟಗಾರಿಕೆ, ಅದರಲೂ ಮುಖ್ಯವಾಗಿ ಸಂಗೀತದಲ್ಲಿ ಬಹುರೂಪಗಳನ್ನು ಹೊಂದಿ ಅಭಿವ್ಯಕ್ತವಾಗುತ್ತದೆ. ಸಂಗೀತದಲ್ಲಿ ಈ ತುಡಿತದ ಮೂಲಕ ಆತ್ಮವು ಸ್ವರ್ಗೀಯ ಸೌಂದರ್ಯವನ್ನು ಸೃಷ್ಟಿಸಲು ಬೇಕಾದ ಉನ್ನತ ಸ್ತರವನ್ನು ಮುಟ್ಟುತ್ತದೆ. ಸಂಗೀತ ಮತ್ತು ಕಾವ್ಯದ ಲಯ ಪ್ರಾಸಗಳು ಹೆಚ್ಚು ಸಾಮ್ಯತೆಯನ್ನು ಹೊಂದಿರುತ್ತವೆ.

ತನ್ನ ಕಾವ್ಯ ಕಲ್ಪನೆಯ ಸಾರವನ್ನು ತನ್ನ ಲೇಖನ 'The Poetic Principle' ನಲ್ಲಿ ಎಡ್ಗರ್ ಅಲೆನ್ ಪೋ ಸ್ಪಷ್ಟಪಡಿಸಿದ್ದಾನೆ. ಕವಿಯಲ್ಲಿ ನಿಜ ಕಾವ್ಯ ಪರಿಣಾಮಗಳನ್ನು ಉಂಟುಮಾಡುವ ಅಂಶಗಳ ಹೀಗಿರುತ್ತವೆ ಎಂದು ಗುರುತಿಸುತ್ತಾನೆ:



"ಕವಿಯು ತನ್ನ ಆತ್ಮವನ್ನು ಪೋಷಿಸುವ ಅಮೃತವನ್ನು ತಿಳಿದಿರುತ್ತಾನೆ, ಸ್ವರ್ಗದಲ್ಲಿ ಹೊಳೆಯುವ ಉಜ್ವಲವಾದ ಗೋಲಗಳಲ್ಲಿ – ಹೂಗಳ ಸುರಳಿಗಳಲ್ಲಿ ನೆಲಮಟ್ಟದಲ್ಲಿ ಬೆಳೆಯುವ ಗುಂಪು ಗುಂಪಾದ ಪೊದೆಗಳಲ್ಲಿ, ಧಾನ್ಯ ಭರಿತ ತೆನೆಗಳ ತೊಯ್ದಾಟಗಳಲ್ಲಿ, ಪೂರ್ವದಿಕ್ಕಿನ ಎತ್ತರದ ಮರಗಳ ಬಾಗುವಿಕೆಯಲ್ಲಿ ದೂರದ ನೀಲಿ ಪರ್ವತಗಳಲ್ಲಿ, ಮೋಡಗಳ ಗೊಂಚಲಿನಲ್ಲಿ, ಕಣ್ಣಾಮುಚ್ಚಾಲೆ ಆಡುವ ಕಿರುಝರಿಗಳ ಹೊಳಪಿನಲ್ಲಿ, ಬೆಳ್ಳಿ ನದಿಗಳ ನುಣ್ಬೆಳಕಿನಲ್ಲಿ, ತ್ಯಜಿಸಲ್ಪಟ್ಟ ಕೊಳಗಳ ಶಾಂತತೆಯಲ್ಲಿ, ಒಂಟಿ ಬಾವಿಗಳ ಆಳವನ್ನು ಪ್ರತಿಫಲಿಸುವ ನಕ್ಷತ್ರಗಳಲ್ಲಿ ಅದರ ಸವಿಯನ್ನು ಅನುಭವಿಸುತ್ತಾನೆ. ಕವಿಯು ಕಾವ್ಯಾಮೃತವನ್ನು ಪಕ್ಷಿಯ ಹಾಡುಗಳಲ್ಲಿ, Æolus ನ ಹಾರ್ಪ್ ವಾದ್ಯದಲ್ಲಿ, ಇರುಳಿನ ಗಾಳಿಯ ನಿಟ್ಟುಸಿರಿನಲ್ಲಿ, ಕಾಡಿನ ಅತೃಪ್ತ ಧ್ವನಿಯಲಿ, ದಡಕ್ಕೆ ಬಂದು ದೂರು ಹೇಳುವ ನೊರೆಯಲ್ಲಿ, ಕಾಡಿನ ಸ್ವಚ್ಛ ನಿಶ್ವಾಸದಲ್ಲಿ, ವೈಲೆಟ್ ಹೂಗಳ ಸುಗಂಧದಲ್ಲಿ – ಹಯಸಿನ್ತ್ ಪರಿಮಳದ ಉದ್ದೀಪಕ ಸೌಂದರ್ಯದಲ್ಲಿ ದೂರ ದೂರದ, ಅನ್ವೇಷಿಸದ, ಕಳೆಗುಂದಿದ ಸಾಗರಗಳ ಮೇಲಿಂದ ಹಾದು ಬರುವ ಅಗಣಿತ, ಅನ್ವೇಷಣೆಗೆ ಒಳಪಡದ ಉಸಿರಿನಲ್ಲಿ ಕಾಣುತ್ತಾನೆ. ಉನ್ನತ ವಿಚಾರಗಳಲ್ಲಿ, ಅಪ್ರಾಪಂಚಿಕ ಉದ್ದೇಶಗಳಲ್ಲಿ, ಎಲ್ಲಾ ಪವಿತ್ರ ಪ್ರೇರಣೆಗಳಲ್ಲಿ, ಘನತೆವೆತ್ತ, ಉದಾರ, ಸ್ವಾರ್ಥ ತ್ಯಾಗದ ಕಾರ್ಯಗಳಲ್ಲಿ ಕಾವ್ಯಸಾರವನ್ನು ಗುರುತಿಸುತ್ತಾನೆ. ಹೆಣ್ಣಿನ ಲಾವಣ್ಯದಲ್ಲಿ, ಅವಳ ಬೆಡಗಿನ ನಡೆಯಲ್ಲಿ ಕಣ್ಣ ಹೊಳಪಿನಲ್ಲಿ, ಧ್ವನಿಯ ಮಾಧುರ್ಯದಲ್ಲಿ, ಅವಳ ಮೃದುವಾದ ನಗುವಿನಲ್ಲಿ – ನಿಟ್ಟುಸಿರಿನಲ್ಲಿ, ಅವಳ ಉಡುಪಿನ ಮರ್ಮರ ಶಬ್ದದ ಸ್ವರಮೇಳದಲ್ಲಿ ಕಾವ್ಯವನ್ನು ಗುರುತಿಸುತ್ತಾನೆ. ಅವಳು ಗೆಲ್ಲುವ ಪ್ರೀತಿಯಲ್ಲಿ, ಚಿಮ್ಮುವ ಸಂಭ್ರಮದಲ್ಲಿ, ವಿನೀತ ಉದಾರತೆಯಲ್ಲಿ – ನಮ್ರ ಮತ್ತು ದೈವಿಕ ತಾಳ್ಮೆಯಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ......... ಆಹಾ........... ಎಲ್ಲಕ್ಕಿಂತ ಎತ್ತರದಲ್ಲಿ ಅವಳ ನಂಬಿಕೆ, ಶುದ್ಧತೆ, ಸಾಮರ್ಥ್ಯ, ಒಟ್ಟಾರೆಯಾಗಿ ಅವಳ ಪ್ರೀತಿಯ ದೈವಿಕ ಘನತೆಗೆ ಮಂಡಿಯೂರಿ ಶರಣೆನ್ನುತ್ತಾನೆ."

---

*1 - A Philosophical Inquiry into the origin of our Ideas of the Sublime and Beautiful (1975)

*2 - Elements of Criticism

*3 - Acritique of Joseph Addison's 'The Pleasure of Imagination' Dr. M. Panda, 1998

– ಡಾ॥ ಕೆ.ಬಿ. ಸರಸ್ವತಿ
ಸ.ಪ್ರ.ದ ಕಾಲೇಜು, ತಿಪಟೂರು
n.sarassri@rediffmail.com



## ಪರಿಚಯ: ಅಡೋರ್ನೊ ಮತ್ತು ಹಾರ್ಕ್ ಹೈಮರ್ ಅವರ "Cultural Industry: Enlightenment as Mass Deception"ಲೇಖನದ ವಿಶ್ಲೇಷಣೆ

(ಸಂಸ್ಕೃತಿ ಮತ್ತು ಸಂಸ್ಕೃತಿ ಅಧ್ಯಯನದ ಮರುಚಿಂತನೆ: ಪೂರ್ವದ ಓದು – ಪ್ರಸ್ತುತದ ಅರ್ಥೈಸಿಕೊಳ್ಳುವಿಕೆ – ಭವಿಷ್ಯದ ಚಿಂತನೆ ಮಾಲಿಕೆಯ 3ನೇ ಭಾಗ)

ಆಧುನಿಕ ಮಾಸ್/ಪಾಪ್ಯುಲರ್ ಸಂಸ್ಕೃತಿಯನ್ನು ಕಟುವಾಗಿ ಟೀಕಿಸಿದವರಲ್ಲಿ ಆರ್ನಾಲ್ಡ್ ಮತ್ತು ಲೀವಿಸ್ ಜೊತೆಗೆ ಅಡೋರ್ನೊ ಮತ್ತು ಹಾರ್ಕ್ ಹೈಮರ್ ಕೂಡ ಪ್ರಮುಖರು. "ಸಂಸ್ಕೃತಿಯು ಬಂಡವಾಳ ಶಾಹಿ ಆಧಾರಿತ ಸಂಸ್ಕೃತಿ ಕೈಗಾರಿಕೆಯ ಉತ್ಪನ್ನ" ಎಂದು ವಿಭಿನ್ನವಾದ ವ್ಯಾಖ್ಯಾನ ನೀಡುವ ಮೂಲಕ ಸಂಸ್ಕೃತಿಯನ್ನು ಆಧುನಿಕ ಬಂಡವಾಳಶಾಹಿ ವ್ಯವಸ್ಥೆಯೊಂದಿಗೆ ಥಳುಕು ಹಾಕಿದರು. ಇವರ ಸಂಸ್ಕೃತಿ ವಿಮರ್ಶೆಯೂ ನಂತರ ಬಂದ ಚಿಂತಕರಿಂದ ಟೀಕೆಗೊಳಗಾದರೂ ಅವರು ತಮ್ಮ ಕೃತಿ "ಡಯಲೆಕ್ಟಿಕ್ ಆಫ್ ಎನ್‌ಲೈಟನ್‌ಮೆಂಟ್" (1944) ಕೃತಿಯಲ್ಲಿ ಕಾರ್ಲ್ ಮಾರ್ಕ್ಸ್‌ನ "ಡಯಲೆಕ್ಟಿಕಲ್ ಮಟೀರಿಯಲಿಸಂ"ನ ಪ್ರಭಾವದೊಂದಿಗೆ ಬರೆದ "Cultural Industry: Enlightenment as Mass Deception" ಎಂಬ ಲೇಖನದಲ್ಲಿ ಆಧುನಿಕ ಸಂಸ್ಕೃತಿಯನ್ನು ಒಪ್ಪುವ/ಬಿಡುವ ಬಗ್ಗೆ ಕೆಲವು ಮೂಲಭೂತ ಪ್ರಶ್ನೆಗಳನ್ನು ಹಾಕಿದ್ದರಿಂದಾಗಿ ಅವರ ಸಂಸ್ಕೃತಿ ವಿಮರ್ಶೆಯನ್ನು ಕುರಿತು ಚಿಂತಿಸುವುದು ಇಲ್ಲಿ ಮುಖ್ಯವೆನಿಸುತ್ತದೆ.

ಅವರ ಪ್ರಮುಖ ವಾದ ಇಷ್ಟೆ: "ಆಧುನಿಕ ಬಂಡವಾಳಶಾಹಿಯೊಂದಿಗೆ ಸಂಬಂಧ ಹೊಂದಿರುವ ಸಂಸ್ಕೃತಿಯನ್ನು ನೈಜ ಸಂಸ್ಕೃತಿ ಎಂದು ಒಪ್ಪುವುದಾದರೂ ಹೇಗೆ?" ಅದಕ್ಕೆ ಅವರು ಕೊಡುವ ವಿವರಣೆಗಳು:

- ಪಾಪ್ಯುಲರ್ ಸಂಸ್ಕೃತಿಯನ್ನು ನಾವು genuine (ಸಹಜ/ನೈಜ) way of life ಎಂದು ಒಪ್ಪಬಹುದೇ?
- ನಿಜವಾಗಿಯೂ ಅದು authentic ಆಗಿದೆಯೇ?

ಹಾಗಿದ್ದಲ್ಲಿ ಅದು ಆಧುನಿಕ ಬಂಡವಾಳಶಾಹಿ ವ್ಯವಸ್ಥೆಯಿಂದ ಮುಕ್ತವಾಗಿದೆಯೇ? ಜರ್ಮನ್–ಅಮೇರಿಕನ್ ಸಿದ್ಧಾಂತಿಗಳಿಂದ ಕೂಡಿದ್ದ ಸಮಾಜಶಾಸ್ತ್ರೀಯ ವಿಶ್ಲೇಷಣೆಯ ಕೇಂದ್ರವಾಗಿದ್ದ ಸಾಹಿತ್ಯಕ, ವಿಮರ್ಶಾತ್ಮಕ ಮತ್ತು ಸಾಂಸ್ಕೃತಿಕ ಪಂಥವಾದ "ಫ್ರ್ಯಾಂಕ್‌ಫರ್ಟ್ ಸ್ಕೂಲ್" (Frankfurt School) ನ ಹಿನ್ನೆಲೆ ಹೊಂದಿದ್ದ ಅಡೋರ್ನೊ ಮತ್ತು ಹಾರ್ಕ್ ಹೈಮರ್,



ಕಾರ್ಲ್ ಮಾರ್ಕ್ಸ್‌ನ ಚಿಂತನೆಗಳು ಮತ್ತು ಮಾಡರ್ನ್ ಪಾಪ್ಯುಲರ್ ಕಲ್ಚರ್‌ನ ಮೇಲೆ ಅವುಗಳ ಪ್ರಭಾವ ಹಾಗೂ ಅವುಗಳಿಂದಾಗಿ ಅಂದಿನ ಪಾಶ್ಚಿಮಾತ್ಯ ಬಂಡವಾಳಶಾಹಿ ಸಮಾಜಗಳಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ಗಮನಿಸಿ ಈ ಲೇಖನವನ್ನು ಬರೆದರು. ಅದರಲ್ಲಿ "ಸಾಂಸ್ಕೃತಿಕ ಸರಕು ಸೇವೆಗಳನ್ನು ಉತ್ಪಾದಿಸುವ ಕಲ್ಚರ್ ಇಂಡಸ್ಟ್ರಿಯು ಆಧುನಿಕ ಬಂಡವಾಳದಲ್ಲಿ ತನ್ನ ಆಧಾರವನ್ನು ಹೊಂದಿದೆ" ಎಂದು ವಾದಿಸಿದರು.

ಇದರ ಜೊತೆಗೆ "ಸಂಸ್ಕೃತಿ/ಸಾಂಸ್ಕೃತಿಕ ಅಂಶಗಳ ಮೌಲ್ಯ (use value) ನಿಜವಾಗಿಯೂ aesthetic, diverting (ಮನರಂಜನೆ) ಮತ್ತು ideological ಆಗಿರಬೇಕು; ಆದರೆ ಇಂದು ಕಾಣುತ್ತಿರುವ 'ಪಾಪ್ಯುಲರ್' ಸಂಸ್ಕೃತಿಯು 'ಕಲ್ಚರ್ ಇಂಡಸ್ಟ್ರಿ'ಯ ಮೂಲಕ ತನ್ನ ಉತ್ಪನ್ನಗಳಿಗೆ ಗ್ರಾಹಕರನ್ನು ಸೃಷ್ಟಿಸುಕೊಳ್ಳುವ ನೈತಿಕವಲ್ಲದ ಮೌಲ್ಯವನ್ನು ರೂಢಿಸಿಕೊಳ್ಳುತ್ತಿದೆ" ಎಂದೂ ಅವರು ವಾದಿಸಿದರು. ಅವರ ಮಾತುಗಳಲ್ಲೇ ಹೇಳುವುದಾದರೆ:

"The culture industries are like any other capitalist industry. They use 'alienated labor'; 'pursue profit'; 'look to technology and to machinery to provide a competitive edge'. They are primarily in the business of producing 'consumers'" ಈ ರೀತಿ ಆಧುನಿಕ ಸಂಸ್ಕೃತಿಯನ್ನು manufactured ಸಂಸ್ಕೃತಿಯೇ ಹೊರತು genuine ಸಂಸ್ಕೃತಿಯಲ್ಲವೆಂದು ತೆಗಳಿದರು. ಹಾಲಿವುಡ್ ಸಿನೆಮಾ, ಟೆಲಿಸೀರಿಯಲ್‌ಗಳು, ಪಾಪ್ ಸಂಗೀತದಂತಹ ಆಧುನಿಕ ಸಂಸ್ಕೃತಿ ಮಾಧ್ಯಮಗಳನ್ನು ಅಧ್ಯಯನ ಮಾಡಿ ತಾವು ಕಂಡುಕೊಂಡ ಅಂಶಗಳನ್ನು ತಮ್ಮ ಈ ಲೇಖನದಲ್ಲಿ ವಿಶ್ಲೇಷಿಸಿದರು. ಅವರ ಪ್ರಕಾರ ಪಾಪ್ಯುಲರ್ ಸಂಸ್ಕೃತಿಯು ಈ ಮಾಧ್ಯಮಗಳ ಮೂಲಕ ತನ್ನ ದೃಷ್ಟಿಕೋನ ಅಥವಾ ಆದರ್ಶಗಳನ್ನು ಒಪ್ಪುವಂತೆ ಜನರ "mind prepare" ಮಾಡುತ್ತಿದೆ. ನಾವು

ಸಾಮಾನ್ಯವಾಗಿ ಹೇಳುವ "brainwashing" ಎಂಬ ಅರ್ಥದಲ್ಲಿ ಆಧುನಿಕ-ಜನಸಾಮಾನ್ಯರ (modern popular) ಸಂಸ್ಕೃತಿಯನ್ನು ಸ್ವಾಭಾವಿಕವಲ್ಲದ ಅಥವಾ artificial ಸಂಸ್ಕೃತಿ ಎಂದು ಜರಿದರು. ಅವರು ಗುರುತಿಸಿದ ಪ್ರಕಾರ, ಬಂಡವಾಳಶಾಹಿ ವ್ಯವಸ್ಥೆಯು ಹೇಗೆ ಹೂಡಿಕೆ, ಬೇಡಿಕೆ-ಪೂರೈಕೆ ಮತ್ತು ಆಧುನಿಕ ಬಂಡವಾಳಶಾಹಿಯ ಆದರ್ಶಗಳಾದ ಲಾಭಗಳಿಕೆ.......ಇತ್ಯಾದಿಗಳನ್ನು ಆಧರಿಸಿರುತ್ತದೆಯೋ ಹಾಗೆಯೇ ಇಂದಿನ ಟಿ.ವಿ., ರೇಡಿಯೋ, ಆರ್ಕೆಸ್ಟ್ರಾ, ನೃತ್ಯ ಕಲೆ.......ಇತ್ಯಾದಿಗಳೂ ಕಾಡ money-minded ಆಗಿವೆ. ಇದರಿಂದ consumerism ಅನ್ನು ಹೆಚ್ಚಿಸುವ ಮೂಲಕ ಅನುಭೋಗಿಗಳು ಚಿಂತನಾ/ವಿವೇಚನಾ ಸಾಮರ್ಥ್ಯವನ್ನು ಕಳೆದುಕೊಂಡು ನಿಷ್ಕ್ರಿಯ (passive receivers) ರಾಗುತ್ತಿದ್ದಾರೆ.

ಅಡೋರ್ನೊ ಮತ್ತು ಹಾರ್ಕ್ ಹೈಮರ್ ತಮ್ಮ ಈ ಲೇಖನದಲ್ಲಿ ಪಾಪ್ಯುಲರ್ ಸಂಸ್ಕೃತಿಯ ಬಗ್ಗೆ ವಿಮರ್ಶಿಸಿದ ಇತರೆ ಅಂಶಗಳೆಂದರೆ:

- ಪಾಪ್ಯುಲರ್ ಸಂಸ್ಕೃತಿಯು ನೈತಿಕ ವ್ಯವಸ್ಥೆಯನ್ನು ಬಿಟ್ಟು, ಅಸ್ತಿತ್ವದಲ್ಲಿರುವ ಅಧಿಕಾರ ಪ್ರಭುತ್ವ/ರಾಜಕೀಯ ವ್ಯವಸ್ಥೆಯನ್ನು ಬೆಂಬಲಿಸುತ್ತದೆ.

- ಪಾಪ್ಯುಲರ್ ಸಂಸ್ಕೃತಿಗೆ ತನ್ನದೇ ಆದರ್ಶಗಳಿವೆ ಎಂದು ಒಪ್ಪಬಹುದಾದರೂ ನೈಜವಾಗಿ ಅದು ಆದರ್ಶಗಳಲ್ಲಿ neutral ಆಗಿದೆ; ಅಲ್ಲದೆ, ಮನರಂಜನೆಯನ್ನೇ ತನ್ನ ಮೂಲತತ್ವವನ್ನಾಗಿಸಿಕೊಂಡಿದೆ.

- ಪಾಪ್ಯುಲರ್ ಸಂಸ್ಕೃತಿಯು ಹಲವು ಬಾರಿ ಜನರನ್ನು ನೈಜತೆಯಿಂದ fantacyಗೆ ಕೊಂಡೊಯ್ಯುವ ಮೂಲಕ ಅವರಿಗೆ ಕ್ಷಣಿಕ ತೃಪ್ತಿ ನೀಡಿದರೂ ಇದು ಮುಂದೆ ವಾಸ್ತವತೆಯಿಂದ ಜನರು escapists ಆಗಲು ಮತ್ತು ಭ್ರಮೆಯನ್ನೇ ವಾಸ್ತವವೆಂದು ನಂಬುವಂತೆ ಮಾಡುತ್ತದೆ.

- ತಕ್ಷಣದ ಸಂತೋಷ ಮತ್ತು ಮನರಂಜನೆಯನ್ನಷ್ಟೇ ನೀಡುವ ಇದು ಅನುಭೋಗಿ ಸಂಸ್ಕೃತಿ (consumer culture) ಯಾಗುತ್ತಿದೆ. ಸಹಜವಾಗಿಯೇ ಇದು ಮಾಸ್ ಸಂಸ್ಕೃತಿಯ ಏಕಸ್ವಾಮ್ಯವಲ್ಲದೆ ಮತ್ತೇನೂ ಅಲ್ಲ.

ಇಷ್ಟೆಲ್ಲಾ ಅಂಶಗಳ ನಡುವೆ, ಅಡೋರ್ನೊ ಮತ್ತು ಹಾರ್ಕ್ ಹೈಮರ್ ಕೂಡ ಪಾಪ್ಯುಲರ್ ಸಂಸ್ಕೃತಿಯನ್ನು 'ಈಸ್ಥೆಟಿಕ್', 'ಕಲಾತ್ಮಕ', 'ಆದರ್ಶಾತ್ಮಕ' ಮತ್ತು 'ನೈತಿಕ' ಸಂಗತಿಯೆಂದು ಒಪ್ಪುತ್ತಾರೆ. ಆದರೆ, ಅವರ ಪ್ರಕಾರ, ಅದು ತನ್ನ ಸಾಂಸ್ಕೃತಿಕ ಅಂಶಗಳನ್ನು ಮೌಲ್ಯಗಳೆಂದು ಬಿಂಬಿಸುವ ಬದಲು ಸರಕು-ಸೇವೆಗಳ ರೂಪದಲ್ಲಿ ಸೃಷ್ಟಿಸುತ್ತ ಮನರಂಜನೆಯನ್ನು ವ್ಯಾಪಾರೀಕರಣವನ್ನಾಗಿಸುತ್ತಿದೆ.

ಉದಾಹರಣೆಗೆ, ಅಮೇರಿಕಾದ ರಾಜಕೀಯ ಪ್ರಭುತ್ವದ propagandaದ ಹಿನ್ನೆಲೆ ಹೊಂದಿದ್ದ 'ಜಾಜ್' ('Jazz') (ಪಾಪ್ಯುಲರ್ ಸಂಗೀತದ ಒಂದು ವಿಧ) ಕೇವಲ ಮನರಂಜನೆ ಮತ್ತು ಅನುಕರಣೆಯಿಂದಲೇ ಜನಪ್ರಿಯವಾಗಿದ್ದಲ್ಲದೇ, ಕಲಾತ್ಮಕವಾದ, ನೈತಿಕ ಮೌಲ್ಯಗಳಿಂದ ಕೂಡಿರುವ ಶ್ರೇಷ್ಠ ಶಾಸ್ತ್ರೀಯ (classical) ಸಂಗೀತಕ್ಕೆ ಯಾವುದೇ ಬೆಲೆ ಕೊಡುತ್ತಿಲ್ಲ ಎಂದು ವಾದಿಸಿದರು. ಅವರೇ ಹೇಳುವಂತೆ-

"....... the culture industry remains the entertainment business. Its influence over the consumers is established by entertainment......."

ಹೀಗಿರುವಾಗ ಜನರು ಯಾಕೆ ಪಾಪ್ಯುಲರ್ ಸಂಸ್ಕೃತಿಯನ್ನೇ ಹೆಚ್ಚು ಅನುಭೋಗಿಸುತ್ತಾರೆ? ಇದಕ್ಕೆ ಅಡೋರ್ನೊ ಮತ್ತು ಹಾರ್ಕ್ ಹೈಮರ್ ಕೊಡುವ ಉತ್ತರ- "ಅದೇ ಪಾಪ್ಯುಲರ್ ಸಂಸ್ಕೃತಿಯ ಸಾಮರ್ಥ್ಯ. ಅದು ಜನರನ್ನು ಆಕರ್ಷಿಸುವುದಲ್ಲದೆ ಆಯ್ಕೆಗಳಿಗೆ ಅವಕಾಶವೇ ಇಲ್ಲದಂತೆ ಸಂಸ್ಕೃತಿ ಕೈಗಾರಿಕೆಯಲ್ಲಿ ಯೋಜನಾಬದ್ಧವಾಗಿ (ಸ್ವಾಭಾವಿಕವಾಗಿ ಅಲ್ಲದ) ಉತ್ಪಾದನೆಯಾದ ಸರಕು-ಸೇವೆಗಳನ್ನು ಒಪ್ಪುವಂತೆ ಮಾಡುತ್ತದೆ."

ಎನ್‌ಲೈಟನ್‌ಮೆಂಟ್ ಆ್ಯಸ್ ಮಾಸ್ ಡಿಸೆಪ್ಷನ್:

18ನೇ ಶತಮಾನದಲ್ಲಿ ಯೂರೋಪಿನಲ್ಲಾದ ಸಾಮಾಜಿಕ, ವೈಜ್ಞಾನಿಕ, ತಾಂತ್ರಿಕ, ಶಾಸ್ತ್ರೀಕ... ಬದಲಾವಣೆಗಳಿಗೆ ಕಾರಣವಾದ 'ಎನ್‌ಲೈಟನ್‌ಮೆಂಟ್' (ಜ್ಞಾನೋದಯ)ಅನ್ನು ಅಡೋರ್ನೊ ಮತ್ತು ಹಾರ್ಕ್ ಹೈಮರ್ ಮಾನವನ ಚಿಂತನೆಯಲ್ಲಾದ ಮಹತ್ತರ ಸಾಧನೆ ಎಂದು ವ್ಯಾಖ್ಯಾನಿಸಿದರೂ ಸಂಸ್ಕೃತಿಗೆ ಸಂಬಂಧಿಸಿದಂತೆ ಅದೊಂದು ಬಲವಾದ ಪೆಟ್ಟು ಎಂದು ವ್ಯಾಖ್ಯಾನಿಸಿದರು. ಅದು ಸಂಸ್ಕೃತಿಯನ್ನು ಸಂಸ್ಕೃತಿ ಕೈಗಾರಿಕೆಯಲ್ಲಿ ಉತ್ಪಾದಿಸಲು ಯಾವಾಗ ಆರಂಭಿಸಿತೋ ಆಗಲೇ ಅದು

ಜನರನ್ನು ಮೋಸಗೊಳಿಸುವುದೂ ಆರಂಭವಾಯಿತು. ಹೀಗಾಗಿ ಅವರು 'ಜ್ಞಾನೋದಯವೆಂಬ ಅರ್ಥವಿರುವ ಎನ್‌ಲೈಟನ್‌ಮೆಂಟ್ ಸಾಮಾನ್ಯ ಜನರನ್ನು ಇಡಿಯಾಗಿ ಮೋಸಗೊಳಿಸುವ ವ್ಯವಸ್ಥೆಯಾಯಿತು' ಎಂದು ಟೀಕಿಸಿದರು. ಉದಾಹರಣೆಗೆ, ಇಂದಿನ ಬಹುತೇಕ ಪಾಪ್ಯುಲರ್ ಸಿನೆಮಾಗಳು ಹಿಂಸೆ, ಕ್ರೌರ್ಯವನ್ನು ಮನರಂಜನೆಯ ಹೆಸರಿನಲ್ಲಿ ವೈಭವೀಕರಿಸುತ್ತಿವೆ ಮತ್ತು ಜನ ಅದನ್ನು ಒಪ್ಪುತ್ತಿದ್ದಾರೆ ಕೂಡ.

ಆದರೆ, ಅವರ ಪ್ರಕಾರ, ಶ್ರೇಷ್ಠ ಸಂಸ್ಕೃತಿಗೂ, ಪಾಪ್ಯುಲರ್ ಸಂಸ್ಕೃತಿಗೂ ವ್ಯತ್ಯಾಸವಿರುವುದೇ ಅಲ್ಲಿ. ಅಂದರೆ 'ಎನ್‌ಲೈಟನ್‌ಮೆಂಟ್ ಎಂಬುದು ಸಾಮಾನ್ಯ ಜನರನ್ನು ಮೋಸಗೊಳಿಸುವ ವ್ಯವಸ್ಥಿತ ಹುನ್ನಾರವಾಗಿದೆ' ಎಂದು ವಾದಿಸಿದರು. ಇಲ್ಲಿ ಅವರು ಮತ್ತೊಂದು ಪ್ರಶ್ನೆ ಹಾಕುತ್ತಾರೆ: ಹಾಗಿದ್ದರೆ ಅದು ಹೇಗೆ ಜನಪ್ರಿಯ ಸಂಸ್ಕೃತಿಯಾಗುತ್ತದೆ? ಅದಕ್ಕೆ ಅವರು ಕೊಡುವ ಆಘಾತಕಾರಿ ಉತ್ತರ: ನಾವು ಅಂತಹ ಸಿನೆಮಾಗಳನ್ನು ನೋಡಿ ಆನಂದಿಸುತ್ತಿದ್ದೇವೆ. ಏಕೆಂದರೆ, ಆ ಹಿಂಸೆ, ಕ್ರೌರ್ಯ ಎಲ್ಲವೂ ಬೇರೆಲ್ಲೂ ಇಲ್ಲ, ನಮ್ಮಲ್ಲೇ ಇದೆ.

ಅಡೋರ್ನೊ ಮತ್ತು ಹಾರ್ಕ್ ಹೈಮರ್ ಅವರ ಈ ಲೇಖನವನ್ನು ಕೆಳಗಿನಂತೆ ವಿಶ್ಲೇಷಿಸಬಹುದು:

- ಸಂಸ್ಕೃತಿ ಕೈಗಾರಿಕೆಯು ವೈಯಕ್ತಿಕ ಆಸೆ, ಆಯ್ಕೆಯ ಸ್ವಾತಂತ್ರ್ಯಗಳನ್ನು ಕಿತ್ತುಕೊಳ್ಳುತ್ತಿದೆ.
- ಇದರಿಂದಾಗಿಯೇ ಜನಸಾಮಾನ್ಯರೆಲ್ಲರು "ಸಾಮಾನ್ಯ ಜನ" ರಾಗುತ್ತಿರುವುದು.
- ಇದು ಸಂಸ್ಕೃತಿ ಕೈಗಾರಿಕೆಯ ಆದರ್ಶಗಳನ್ನು ಸಾಮಾನ್ಯ ಜನರ ಮೇಲೆ ಹೇರುತ್ತಿರುವ ಸ್ವರೂಪ ಮತ್ತು ಇಲ್ಲಿಯೇ ಆಧುನಿಕ ಪಾಪ್ಯುಲರ್ ಸಂಸ್ಕೃತಿಯ propaganda ಯಶಸ್ವಿಯಾಗುತ್ತಿರುವುದು.
- ಇದು ಆಧುನಿಕ ಬಂಡವಾಳಶಾಹಿಯ ಭದ್ರ ಬುನಾದಿ ಹೊಂದಿರುವುದರಿಂದ ಅಸ್ತಿತ್ವದಲ್ಲಿರುವ ಪ್ರಭುತ್ವವನ್ನು ಬೆಂಬಲಿಸುತ್ತಿದೆ.
- ಇದು ಈಸ್ಥೆಟಿಕ್ ಆಗಿರುವ, ಕಲಾತ್ಮಕವಾಗಿರುವ ಆದರ್ಶಗಳನ್ನು ಹೊಂದಿರುವ ಸಾಂಸ್ಕೃತಿಕ ಸಂಗತಿಗಳನ್ನು ಮಾರುಕಟ್ಟೆಯಲ್ಲಿ ಕೊಳ್ಳುವ ಸರಕು-ಸೇವೆಗಳೆಂಬಂತೆ ಬಿಂಬಿಸುತ್ತಿದೆ.

ಆದರೆ, ಅವರ ಈ ವಾದವನ್ನು ನಂತರ ಬಂದ ಸಂಸ್ಕೃತಿ ಚಿಂತಕರು ಕಟುವಾಗಿ ಟೀಕಿಸಿದರು. ಅಡೋರ್ನೊ ಮತ್ತು ಹಾರ್ಕ್ ಹೈಮರ್ ಅವರೇ ಕೊಟ್ಟ ಟೆಲಿಸೀರಿಯಲ್, ಸಿನೆಮಾ ಸಂಸ್ಕೃತಿಯಂತಹ ಪಾಪ್ಯುಲರ್ ಮಾಧ್ಯಮಗಳ ಉದಾಹರಣೆಯನ್ನೇ ವಿಶ್ಲೇಷಿಸಿದ ಈ ಚಿಂತಕರು ಅವುಗಳಲ್ಲಿ ವ್ಯಕ್ತವಾಗುವ ಭ್ರಷ್ಟ ರಾಜಕೀಯದ ವಿಡಂಬನೆ, ಕ್ರೌರ್ಯವನ್ನು ತೋರಿಸುವ ಮೂಲಕವೇ ಅದರಿಂದಾಗುವ ಅನಾಹುತಗಳ ಚಿತ್ರಣ ಮತ್ತು ಅಂತಿಮವಾಗಿ ಮಾನವೀಯ ಮೌಲ್ಯಗಳ ಪ್ರತಿಪಾದನೆಯಂತಹ ನೈತಿಕ ಅಂಶಗಳನ್ನು ತೋರಿಸುವ ಮೂಲಕ ಅಡೋರ್ನೊ ಮತ್ತು ಹಾರ್ಕ್ ಹೈಮರ್ ಅವರಂತಹ ಚಿಂತಕರ ವಾದಗಳನ್ನು ತಳ್ಳಿಹಾಕಿದರು. ಇದರ ಬಗ್ಗೆ ಮುಂದಿನ ಸಂಚಿಕೆಯಲ್ಲಿ ತಿಳಿಯೋಣ.

(............. ಮುಂದುವರೆಯುವುದು.)

**ಅಡಿಟಿಪ್ಪಣಿ:**

ಸಂಸ್ಕೃತಿ ಕೈಗಾರಿಕೆ: 'ಕಲ್ಚರ್ ಇಂಡಸ್ಟ್ರಿ' ಎಂಬ ಪದವನ್ನು ಹುಟ್ಟುಹಾಕಿದವರು ಅಡೋರ್ನೊ ಮತ್ತು ಹಾರ್ಕ್ ಹೈಮರ್. ಯುನೆಸ್ಕೋ 1928ರಲ್ಲಿ ಇದನ್ನು ಹೀಗೆ ವ್ಯಾಖ್ಯಾನಿಸಿದೆ: "ಸಾಮಾನ್ಯವಾಗಿ ಹೇಳುವುದಾದರೆ ಸಂಸ್ಕೃತಿ ಕೈಗಾರಿಕೆಯು ಸಂಸ್ಕೃತಿ ಸರಕುಗಳು ಮತ್ತು ಸೇವೆಗಳು ಉತ್ಪಾದನೆಯಾಗುವ ಮತ್ತು ಮರುಉತ್ಪಾದನೆಯಾಗುವ ಹಾಗೂ ಕೈಗಾರಿಕಾ ಮತ್ತು ವಾಣಿಜ್ಯಾತ್ಮಕ ಮಾರ್ಗಗಳಲ್ಲಿ ವಿತರಣೆಯಾಗುವ ರೂಪದಲ್ಲಿ ಅಸ್ತಿತ್ವದಲ್ಲಿರುತ್ತದೆ. ಅಂದರೆ ಕೇವಲ ಆರ್ಥಿಕ ಅಂಶಗಳ ಆಧಾರದ ಮೇಲೆ ಮಾತ್ರ ಅಥವಾ 'ಸಾಂಸ್ಕೃತಿಕತೆ'ಯ ಬಗ್ಗೆ ಯಾವುದೇ ಕಾಳಜಿ ಇಲ್ಲದ ಅಂಶಗಳ ಆಧಾರದ ಮೇಲೆ ಅಸ್ತಿತ್ವದಲ್ಲಿರುತ್ತದೆ." ಸಂಗೀತ, ನೃತ್ಯ, ಸಿನೆಮಾ, ದೂರದರ್ಶನ.......ಇತ್ಯಾದಿ ಸಂಸ್ಕೃತಿ ಆಧಾರಿತ ಸರಕು-ಸೇವೆಗಳನ್ನು ಉತ್ಪಾದಿಸುವ ಮಾಧ್ಯಮಗಳೆಲ್ಲವೂ ಬಂಡವಾಳ ಹೂಡಿಕೆ, ಶ್ರಮ ವಿಭಜನೆ, ತಂತ್ರಜ್ಞಾನ ಬಳಕೆಯಂತಹ ಲಕ್ಷಣಗಳನ್ನು ಹೊಂದಿದ ಸಂಸ್ಕೃತಿ ಕೈಗಾರಿಕೆಯ ಮೇಲೆಯೇ ಆಧಾರವಾಗಿದೆ ಎಂದು ಇದರ ಅರ್ಥ.

– ಸಿದ್ಧರಾಮಯ್ಯ ಡಿ.ಎಂ
ಸರ್ಕಾರಿ ಪದವಿ ಕಾಲೇಜು,
ತಿಪಟೂರು

kalpasahyadri@gmail.com

## ಕವಿತೆ | ನಿನ್ನ ನೋವೆಂದರೆ.........

ನಿನ್ನ ನೋವು ನಿನ್ನ ಬೆನ್ನ ಮೂಳೆಯನ್ನು
ಮುರಿಯುತ್ತಿದೆ; ನಿನ್ನನ್ನು ನಿನಗೆ ಅರ್ಥೈಸಲು

ಹಣ್ಣಿನಂತಹ ಕಲ್ಲನ್ನು ಒಡೆಯಬೇಕು
ಅದರ ಹೃದಯವನ್ನು ಸೂರ್ಯನ ಎದುರು ಹಿಡಿಯಲು
ಹಾಗಾಗಿ ನಿನಗೆ ನಿನ್ನ ನೋವು ಗೊತ್ತಾಗಲೇ ಬೇಕು

ಪ್ರತಿ ದಿನದ ನಿನ್ನ ಚಮತ್ಕಾರಗಳು
ನಿನ್ನ ಹೃದಯವನ್ನು ಖುಷಿ ಪಡಿಸುವುದಿಲ್ಲ
ನಿನ್ನ ನೋವು ನಿನ್ನ ಖುಷಿಗಿಂತ ನೀರಸವಾಗಿದೆ.

ನೀನು ಹೇಗೆ ನಿನ್ನ ಮೈದಾನಗಳ ಮೇಲೆ
ಹಾದು ಹೋಗುವ ಋತುಗಳನ್ನು
ಒಪ್ಪಿಕೊಂಡಿರುವೆಯೋ
ಹಾಗೆಯೇ ನಿನ್ನ ಹೃದಯದ ಋತುಗಳನ್ನು
ಒಪ್ಪಿ ಕೊಳ್ಳಲೇಬೇಕು.

ನಿನ್ನ ಚಳಿಗಾಲದ ದುಃಖವನ್ನು
ಶಾಂತವಾಗಿ, ಸಮಚಿತ್ತದಿಂದ ನೋಡುವುದನ್ನು
ಕಲಿಯುವೆ
ನೀನು ನಿನ್ನ ಬಹುತೇಕ ನೋವನ್ನು ನೀನೆ
ಆಯ್ಕೆ ಮಾಡಿಕೊಂಡಿರುವೆ

ನೀನೆ ಸೃಷ್ಟಿಸಿಕೊಂಡಿರುವ ನಿನ್ನ ಸ್ವಯಂ
ಕಾಯಿಲೆಯನ್ನು
ನಿನ್ನ ಆತ್ಮದ ಕಹಿಯನ್ನು
ನಿನ್ನೊಳಗಿರುವ ವೈದ್ಯನೆ ಗುಣಪಡಿಸುವನು
ಹಾಗಾಗಿ ದಯವಿಟ್ಟು ನಿನ್ನ ವೈದ್ಯನನ್ನು ನಂಬು
ಅವನ ಸಲಹೆಯನ್ನು ಮೌನವಾಗಿ ಕುಡಿ
ಕಾಣದ ಕೈ ನಿನ್ನ ಒರಟಾದ ಮತ್ತು ಭಾರವಾದ
ಕೈಗಳನ್ನು ಮುನ್ನೆಡಸುತ್ತಿದೆ.

ಅವನು ನಿನಗೆ ನೀರು ಕುಡಿಯಲು
ತಂದು ಕೊಟ್ಟ ಮಡಿಕೆ ನಿನ್ನ ತುಟಿ ಸುಡಲಿದೆ,
ಅದರ ತಯಾರಿಗೆ ಕುಂಬಾರ ತನ್ನ
ಪವಿತ್ರವಾದ ಕಣ್ಣೀರನ್ನು ಬೆಳಗಿನ ಮಂಜಿನಿಂದ
ತೋಯ್ದಿರುವ ಮಣ್ಣಿಗೆ ಹದವಾಗಿ ಕಲಸಿ ಕಡೆದಿದ್ದಾನೆ.

– ಖಲೀಲ್ ಗಿಬ್ರಾನ್
ಕನ್ನಡಕ್ಕೆ : ಕೆ. ಕಾಂತರಾಜು

Prathispanda Kannada Monthly literary cultural periodical Title verification no.- KARKAN 22840/10/1/2012 TC

Book Post

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur